KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ ಸೆಪ್ಟೆಂಬರ್ ೧೮, ೨೦೦೮ (ಭಾದ್ರಪದ ೨೭, ಶಕ ವರ್ಷ ೧೯೩೦) | ಸಂಚಿಕೆ ೩೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಅಣೆಕಟ್ಟು ಸುರಕ್ಷತಾ ಪರಿಶೀಲನಾ ಸಮಿತಿ (Dam Safety Review Panel) ಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಗೌರವ ಭತ್ಯೆಯನ್ನು ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಜಸಂಇ 35 ಇಂಸಂಕೇ 2004, ಬೆಂಗಳೂರು, ದಿನಾಂಕ 23–1–2007.
2. ಸರ್ಕಾರಿ ಆದೇಶ ಸಂಖ್ಯೆ: ಜಸಂಇ 22 ಅಭಯೋ 2006, ಬೆಂಗಳೂರು, ದಿನಾಂಕ 4–12–06.
3. ಸರ್ಕಾರಿ ಆದೇಶ ಸಂಖ್ಯೆ: ಜಸಂಇ 18 ಅಭಯೋ 2006, ಬೆಂಗಳೂರು, ದಿನಾಂಕ 28–5–2007.
4. ಅ.ಅ.ಉ. ಮತ್ತು ಮೌ, ಬೆಂಗಳೂರು ರವರ ಪತ್ರ ಸಂಖ್ಯೆ ಅಅ: ಮಾ ಮತ್ತು ಇ: ಅಸುಪಸ: ಎಇ–7, 2007–08, 1383 ದಿ: 11–2–08.
5. ಅ.ಅ.ಉ. ಮತ್ತು ಮೌ, ಬೆಂಗಳೂರು ರವರ ಪತ್ರ ಸಂಖ್ಯೆ ಅಅ: ಮಾ ಮತ್ತು ಇ: ಅಸುಪಸ: ಎಇ–7, 2007–08: 1412, ದಿ: 18–2–08.

**ಪ್ರಸ್ತಾವನೆ :**

1. ಕೇಂದ್ರ ಜಲ ಆಯೋಗದ ಅಣೆಕಟ್ಟು ಸಂರಕ್ಷಣಾ ಕಾರ್ಯ ವಿಧಾನದ ವರದಿಯ ಅನುಸಾರ ರಾಜ್ಯಗಳು ತಮ್ಮಲ್ಲಿರುವ 15 ಮೀಟರ್‌ಗಿಂತ ಎತ್ತರವಿರುವ ಅಣೆಕಟ್ಟುಗಳು ಅಥವಾ 60 ಮಿಲಿಯನ್ ಘನ ಮೀಟರ್‌ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು 10 ವರ್ಷಗಳಿಗೆ ಒಂದು ಬಾರಿ ಪರಿಶೀಲಿಸುವ ಸಲುವಾಗಿ ಒಂದು ಶಾಶ್ವತವಾದ ತಜ್ಞರ ಸಮಿತಿಯನ್ನು ನೇಮಿಸಬೇಕಾಗಿದ್ದು, ಅದರಂತೆ ರಾಜ್ಯದಲ್ಲಿರುವ ಅಣೆಕಟ್ಟುಗಳ ಸುರಕ್ಷತೆ ಪರಿಶೀಲಿಸುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಡಾ: ವೈ.ಕೆ. ಮೂರ್ತಿ, ಮಾಜಿ ಅಧ್ಯಕ್ಷರು, ಕೇಂದ್ರ ಜಲ ಆಯೋಗ, ಇವರ ಅಧ್ಯಕ್ಷತೆಯಲ್ಲಿ ಈ ಮೊದಲೇ ರಚಿಸಲಾಗಿದ್ದ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗಿದೆ. ಹಾಗೂ ಸಭೆ/ಪರಿವೀಕ್ಷಣೆಗಳಲ್ಲಿ ಭಾಗವಹಿಸಿದ ಸಂದರ್ಭದಲ್ಲಿ DSRP ಯ (ಅಣೆಕಟ್ಟು ಸುರಕ್ಷತಾ ಪರಿಶೀಲನಾ ಸಮಿತಿ) ಅಧ್ಯಕ್ಷರಿಗೆ ಪ್ರತಿ ಭೇಟಿಗೆ ರೂ. 7500/– ಹಾಗೂ ಅಧಿಕಾರೇತರ ಸದಸ್ಯರಿಗೆ ಪ್ರತಿ ಭೇಟಿಗೆ ರೂ. 5000/–ಗಳಂತೆ ಸಭಾ ಭತ್ಯೆಯನ್ನು ನಿಗದಿಪಡಿಸಲಾಗಿದೆ. 5 ರಿಂದ 6 ದಿನಗಳ ಅವಧಿಯ ಪ್ರತಿ ಭೇಟಿಯಲ್ಲಿ 3 ರಿಂದ 4 ಅಣೆಕಟ್ಟುಗಳನ್ನು ಪರಿವೀಕ್ಷಿಸಲಾಗುತ್ತಿದೆ. ಮುಂದುವರೆಯುತ್ತ, ಸದರಿ ತಜ್ಞರ ಸಮಿತಿಯಿಂದ ರಾಜ್ಯದಲ್ಲಿನ ಅಣೆಕಟ್ಟುಗಳನ್ನು ನಿಗದಿತ ಕಾಲಾವಧಿಯಲ್ಲಿ ಪರಿಶೀಲಿಸಲು ಸಾಧ್ಯವಾಗದಿರುವ ಹಿನ್ನೆಲೆಯಲ್ಲಿ ಡಾ: ವೈ.ಕೆ. ಮೂರ್ತಿರವರ ಸಲಹೆಯಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರಾಜ್ಯದ ಜಲ ಸಂಪನ್ಮೂಲ ಹಾಗೂ ಸಣ್ಣ ನೀರಾವರಿ ಇಲಾಖೆಗಳ ವ್ಯಾಪ್ತಿಯಲ್ಲಿ ಬರುವ ಅಣೆಕಟ್ಟುಗಳನ್ನು ಶ್ರೀ ಎಸ್.ಬಿ. ಕೊಯಮತ್ತೂರ್, ಶ್ರೀ ವೈ.ಎಸ್. ಕಾಂಬ್ಳೆ ಹಾಗೂ

ಶ್ರೀ ಎಂ.ಬಿ. ಪರಪ್ಪಗೌಡರ್, ನಿವೃತ್ತ ಅಧಿಕಾರಿಗಳು, ಇವರ ನೇತೃತ್ವದಲ್ಲಿ ನಾಲ್ಕು ಪ್ರತ್ಯೇಕ, ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ತಂಡಗಳನ್ನು ರಚಿಸಲಾಗಿದೆ. ಸದರಿ ತಂಡಗಳ ಮುಖ್ಯಸ್ಥರಿಗೂ ಸಹ, ಪ್ರತಿ ಭೇಟಿಗೆ ರೂ. 5000/–ಗಳ ಸಭಾ ಭತ್ಯೆಯನ್ನು ನಿಗದಿಪಡಿಸಲಾಗಿದೆ.

2. ಸದರಿ ತಂಡಗಳು ನಿಯಮಿತವಾಗಿ ಅಣೆಕಟ್ಟುಗಳನ್ನು ಪರಿವೀಕ್ಷಿಸಿ, ಪರಿವೀಕ್ಷಣೆಯ ಅಂತಿಮ ದಿನದಂದು ಕರಡು ವರದಿಗಳನ್ನು ತಯಾರಿಸಿ, S.E. M & E, (ಅಧೀಕ್ಷಕ ಅಭಿಯಂತರರು, ಉಸ್ತುವಾರಿ ಮತ್ತು ಮೌಲ್ಯಮಾಪನ) ರವರ ಮುಖೇನ D.S.R.P. ಅಧ್ಯಕ್ಷರು ಹಾಗೂ ಸದಸ್ಯರ ಅವಗಾಹನೆಗೆ ಸಲ್ಲಿಸಲಾಗುವುದು. DSRP ಅಧ್ಯಕ್ಷರು, ಪರಿವೀಕ್ಷಣಾ ವರದಿಗಳನ್ನು ಅವಗಾಹಿಸಿ, ಅಗತ್ಯವಿದ್ದಲ್ಲಿ, ಇತರೇ/ಎಲ್ಲ ಸದಸ್ಯರ ಅಭಿಪ್ರಾಯವನ್ನು ಪಡೆದು, ಸೂಕ್ತ ಮಾರ್ಪಾಟುಗಳೊಂದಿಗೆ, ಸರಿಪಡಿಸಿದ ವರದಿಯನ್ನು, DSRPಯ ಸಂಚಾಲಕರಾದ S.E. M & E, ರವರಿಗೆ, ಹೊರಡಿಸಲು ಹಿಂದಿರುಗಿಸುತ್ತಾರೆ. ಹಾಲಿ ವ್ಯವಸ್ಥೆಯಲ್ಲಿ DSRP ಅಧ್ಯಕ್ಷರು ಹಾಗೂ ಸದಸ್ಯರುಗಳು, ಪರಿವೀಕ್ಷಣಾ ಪ್ರವಾಸ ಕೈಗೊಂಡಲ್ಲಿ ಮಾತ್ರ, ಸಭಾ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಪರಿವೀಕ್ಷಣಾ ತಂಡಗಳು ಸಲ್ಲಿಸುತ್ತಿರುವ ವರದಿಗಳನ್ನು, ಪರಿಶೀಲಿಸಿ ಅಂತಿಮಗೊಳಿಸಲು, ಅವರುಗಳಿಗೆ ಯಾವುದೇ ಭತ್ಯೆಯನ್ನು ನೀಡಲಾಗುತ್ತಿಲ್ಲ.

3. ಈ ವಿಷಯ ಕುರಿತು, ರಾಜ್ಯ ಅಣೆಕಟ್ಟು ಸುರಕ್ಷತಾ ಸಮಿತಿಯ ಅಧ್ಯಕ್ಷರಾದ ಡಾ: ವೈ.ಕೆ. ಮೂರ್ತಿರವರು, DSRP ತಂಡವು ಪರಿವೀಕ್ಷಣಾ ಪ್ರವಾಸ ಖುದ್ದಾಗಿ ಕೈಗೊಳ್ಳದಿದ್ದರೂ, ಉಪತಂಡಗಳು ಸಲ್ಲಿಸುವ ಪರಿವೀಕ್ಷಣಾ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸಲು, ತಮಗೂ ಹಾಗೂ ಇತರೇ ಸದಸ್ಯರಿಗೂ ಸಾಕಷ್ಟು ಸಮಯ, ಪರಿಣತೆ ಹಾಗೂ ಪರಿಶ್ರಮ ಅಗತ್ಯವಿರುವ ಕಾರಣ, ಪ್ರವಾಸ ಕೈಗೊಂಡಾಗ ನೀಡಲಾಗುವ ಸಭಾ ಭತ್ಯೆ ಪರಿಗಣಿಸಿ, ಸೂಕ್ತ ಗೌರವ ಭತ್ಯೆಯನ್ನು ನೀಡುವ ಬಗ್ಗೆ ಪರಿಗಣಿಸುವಂತೆ S.E. M & E, ರವರನ್ನು ಕೋರಿರುತ್ತಾರೆ. ಅದರಂತೆ S.E. M & E, ರವರು ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5)ರ ಪತ್ರಗಳಲ್ಲಿ ಈ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿ, ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 01 ಅಭಯೋ 2008, ಬೆಂಗಳೂರು, ದಿನಾಂಕ: 19ನೇ ಜುಲೈ 2008.**

1. DSRP ಅಧ್ಯಕ್ಷರು ಹಾಗೂ ಸದಸ್ಯರು ಪರಿವೀಕ್ಷಣಾ ಪ್ರವಾಸ ಖುದ್ದಾಗಿ ಕೈಗೊಳ್ಳದಿದ್ದ ಸಂದರ್ಭದಲ್ಲಿ, ಉಪತಂಡಗಳು ಸಲ್ಲಿಸುವ ಪರಿವೀಕ್ಷಣಾ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸಲು, DSRP ಅಧ್ಯಕ್ಷರಿಗೆ ರೂ. 4000/– (ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗೌರವ ಭತ್ಯೆಯನ್ನು ಹಾಗೂ DSRP ಯ ಇತರೇ ಸದಸ್ಯರಿಗೆ ರೂ. 3000/– (ಮೂರು ಸಾವಿರ ರೂಪಾಯಿಗಳು ಮಾತ್ರ) ಗೌರವ ಭತ್ಯೆಯನ್ನು ದಿನಾಂಕ 1–8–2007ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಪಾವತಿಸುವಂತೆ ಆದೇಶಿಸಲಾಗಿದೆ.

2. ಸಮಿತಿಯ ಅಧ್ಯಕ್ಷರಿಗೆ ಹಾಗೂ ಅಧಿಕಾರೇತರ ಸದಸ್ಯರಿಗೆ ಗೌರವ ಭತ್ಯೆಯನ್ನು ಪಾವತಿಸಲು ಉಪ ತಂಡಗಳು, ಪ್ರತಿಯೊಂದು (5 ರಿಂದ 6 ದಿನಗಳ) ಭೇಟಿಯಲ್ಲಿ ನಡೆಸುವ ಪರಿವೀಕ್ಷಣೆಯ ನಂತರ (3 ರಿಂದ 4 ಅಣೆಕಟ್ಟುಗಳು ಒಳಗೊಂಡಂತೆ) ತಯಾರಿಸಿ ಸಲ್ಲಿಸುವ ವರದಿಯನ್ನು ಪರಿಗಣಿಸಬೇಕಾಗುವುದು.

3. ಸಮಿತಿಯ ಅಧ್ಯಕ್ಷರಿಗೆ ಹಾಗೂ ಅಧಿಕಾರೇತರ ಸದಸ್ಯರಿಗೆ ಗೌರವ ಭತ್ಯೆ ವೆಚ್ಚವನ್ನು ಸಂಬಂಧಪಟ್ಟ ಯೋಜನೆಗಳಡಿಯಲ್ಲಿ ಭರಿಸತಕ್ಕದ್ದು. ಸಂಬಂಧಪಟ್ಟ ಮುಖ್ಯ ಇಂಜಿನಿಯರ್‌ರವರು ಗೌರವ ಭತ್ಯೆಗಳ ಬಿಲ್ಲುಗಳನ್ನು ಮೇಲು ಸಹಿ ಮಾಡಿ (ಕೌಂಟರ್ ಸೈನ್) ಹಣ ಪಾವತಿ ಮಾಡಲು ಕ್ರಮ ಕೈಗೊಳ್ಳುವುದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/225/ಅಕೋ–1/2008, ದಿನಾಂಕ 11–7–08 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1077

**ಹೆಚ್. ಪರಶುರಾಮ್**

ಸರ್ಕಾರದ ಉಪ ಕಾರ್ಯದರ್ಶಿ (ಕೃಭಾಜನಿ),

ಜಲಸಂಪನ್ಮೂಲ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಮುಜರಾಯಿ ಇಲಾಖೆಯಲ್ಲಿ ಸ್ಥಿರ ಸ್ವತ್ತಿನ ಗುತ್ತಿಗೆ ನೀಡುವಲ್ಲಿ ಮೀಸಲಾತಿ ಅನುಷ್ಠಾನಗೊಳಿಸುವ ಕುರಿತು.

**ಓದಲಾಗಿದೆ:** 1. ಸಮಾಜ ಕಲ್ಯಾಣ ಇಲಾಖೆಯ ಆದೇಶ ಸಂ: ಎಸ್‌ಡಬ್ಲ್ಯೂಡಿ 34 ಬಿಸಿಎ 04, ಬೆಂಗಳೂರು, ದಿನಾಂಕ 10–3–2006.

2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ:ಎಡಿಎಂ 3 ಎಲ್‌ಎನ್‌ಡಿ 157/05–06, ದಿನಾಂಕ 10–5–2006 ಹಾಗೂ 13–5–2008.

3. ಅಧ್ಯಕ್ಷರು, ಕರ್ನಾಟಕ ದಲಿತ ಕೈಗಾರಿಕೋದ್ಯಮಿಗಳ ಒಕ್ಕೂಟ, ಕಮಲಾನಗರ, ಬೆಂಗಳೂರು ಇವರ ದಿನಾಂಕ 17–8–2007 ಹಾಗೂ 11–6–2008ರ ಮನವಿಗಳು.
4. ಸರ್ಕಾರಿ ಆದೇಶ ಸಂಖ್ಯೆ ಕಂಇ 84 ಮುಆಬಿ 2007, ದಿನಾಂಕ 21–2–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಧಾರ್ಮಿಕ ದತ್ತಿ ಇಲಾಖೆಗೆ ಮೀಸಲಾತಿ ಅನ್ವಯಿಸುವ ಉದ್ದೇಶದಿಂದ ಹಾಗೂ ಕರ್ನಾಟಕ ಸರ್ಕಾರವು ಅನೇಕ ವರ್ಷಗಳಿಂದಲೂ ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದವರ ಸಾಮಾನ್ಯ ಸ್ಥಿತಿಗತಿಗಳನ್ನು ಸುಧಾರಿಸಲು ವಿವಿಧ ಕಾರ್ಯನೀತಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡಿದೆ. ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಅಧಿಸೂಚಿತ ಸಂಸ್ಥೆಗಳ ಕಟ್ಟಡ, ಖಾಲಿ ಜಾಗ, ಅಂಗಡಿ ಮಳಿಗೆಗಳನ್ನು ಬಹಿರಂಗ ಹರಾಜು ಮಾಡುವ ಪ್ರಕ್ರಿಯೆಯಲ್ಲಿ ಕಾಯ್ದೆ ನಿಯಮಗಳಲ್ಲಿನ ಷರತ್ತುಗಳಿಗೆ ಒಳಪಟ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗದವರಿಗೆ ಮೀಸಲಾತಿ ಕಲ್ಪಿಸಲಾಗಿದೆ.

ಓದಲಾದ (1)ರ ಆದೇಶದ ಹಿನ್ನೆಲೆಯಲ್ಲಿ ಧಾರ್ಮಿಕ ದತ್ತಿ ಆಯುಕ್ತರರವರು ಮೇಲೆ ಓದಲಾದ (2)ರ ಪತ್ರದಲ್ಲಿ ಅಧಿಸೂಚಿತ ಸಂಸ್ಥೆಗಳಿಗೆ ಸಂಬಂಧಿಸಿದ ಸ್ಥಿರ ಆಸ್ತಿಗಳನ್ನು ಗುತ್ತಿಗೆಗೆ ನೀಡುವ ಸಂದರ್ಭದಲ್ಲಿ ವಿಧಿಸಬಹುದಾದ ನಿಯಮ ಮತ್ತು ಷರತ್ತುಗಳ ಬಗ್ಗೆ ಸ್ಪಷ್ಟವಾಗಿ ಹೊಸ ಕಾಯ್ದೆಯಲ್ಲಿ ಶಾಸನ ರೂಪಿಸಿದ್ದು, ಆದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮುಜರಾಯಿ ಇಲಾಖೆಯ ಸ್ಥಿರ ಸ್ವತ್ತಿನ ಗುತ್ತಿಗೆಗಳಿಗೆ ಸಂಬಂಧಿಸಿದಂತೆ ವಿಶೇಷ ಸವಲತ್ತುಗಳ ಬಗ್ಗೆ ಸರ್ಕಾರದ ಹಂತದಲ್ಲೇ ಸೂಕ್ತ ನಿರ್ಧಾರ ಕೈಗೊಳ್ಳಲು ವಿನಂತಿಸಿದ್ದಾರೆ.

ಮೇಲೆ ಓದಲಾದ (3)ರ ದಿನಾಂಕ 17–8–2007ರ ಮನವಿಯಲ್ಲಿ ಅಧ್ಯಕ್ಷರು, ಕರ್ನಾಟಕ ದಲಿತ ಕೈಗಾರಿಕೋದ್ಯಮಿಗಳ ಒಕ್ಕೂಟ, ಕಮಲಾನಗರ, ಬೆಂಗಳೂರು ಇವರು ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಅಧಿಸೂಚಿತ ಸಂಸ್ಥೆಗಳ ಕಟ್ಟಡ, ಖಾಲಿ ಜಾಗ, ಅಂಗಡಿ ಮಳಿಗೆಗಳನ್ನು ಬಹಿರಂಗ ಹರಾಜು ಮಾಡುವ ಪ್ರಕ್ರಿಯೆಯಲ್ಲಿ ಕಾಯ್ದೆ ನಿಯಮಗಳಲ್ಲಿನ ಷರತ್ತುಗಳಿಗೆ ಒಳಪಟ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೀಸಲಾತಿ ಕಲ್ಪಿಸುವಂತೆ ಕೋರಿರುತ್ತಾರೆ. ಹಾಗೂ ದಿನಾಂಕ 17–11–2007ರಂದು ಮಾನ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸದರಿ ವರ್ಗದವರಿಗೆ ಮೀಸಲಾತಿ ಕಲ್ಪಿಸುವ ಬಗ್ಗೆ ತೀರ್ಮಾನ ತೆಗೆದುಕೊಂಡು ಈ ಕೆಳಕಂಡಂತೆ ಆದೇಶಿಸಿದೆ.

ಮೇಲಿನ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ, ಸರ್ಕಾರವು ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಸಂಸ್ಥೆಗಳ ಕಟ್ಟಡ, ಖಾಲಿ ಜಾಗ, ಅಂಗಡಿ ಮಳಿಗೆಗಳನ್ನು ಬಹಿರಂಗ ಹರಾಜು ಮಾಡಿ ಗುತ್ತಿಗೆ ನೀಡುವ ಮತ್ತು ಅಂತಹ ಗುತ್ತಿಗೆ ನವೀಕರಿಸುವ ವಿಷಯಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ದಿನಾಂಕ 10–3–2006ರ ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 34 ಬಿಸಿಎ 2004ರಲ್ಲಿನ ಸೂಚನೆಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿಯವರಿಗೆ ಶೇ. 20 ಮತ್ತು ಪರಿಶಿಷ್ಟ ಪಂಗಡದವರಿಗೆ ಶೇ. 5ರಷ್ಟು ಮೀಸಲಿರಿಸಿ ನೀಡಬೇಕೆಂದು ಆದೇಶಿಸಲಾಗಿದೆ. ಬಹಿರಂಗ ಹರಾಜು ಮತ್ತು ಗುತ್ತಿಗೆ ನವೀರಕಣಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಮೀಸಲಾತಿ ಪ್ರಮಾಣವನ್ನು ಕಾಯ್ದುಕೊಳ್ಳತಕ್ಕದ್ದು. ಸಂಸ್ಥೆಗಳ ಹಿತದೃಷ್ಟಿಯಿಂದ ಈ ಕ್ರಮಗಳಲ್ಲಿ ಆರ್ಥಿಕ ನಷ್ಟವಾಗದಂತೆ ಕ್ರಮವಹಿಸುವುದು. ಪ್ರಾರಂಭಿಕವಾಗಿ ಈ ನಿರ್ಣಯವನ್ನು ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಗೆ ಮಾತ್ರ ಅನ್ವಯಿಸಿ ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ವಿಷಯದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ, 1999 ಮತ್ತು ನಿಯಮಾವಳಿ 2000ನ್ನು ಎಲ್ಲೆಲ್ಲಿ ಅವಶ್ಯಕವಾಗಿದೆಯೋ ಅಲ್ಲಲ್ಲಿ ಪಾಲಿಸತಕ್ಕದ್ದು.

ಈ ಹಿನ್ನಲೆಯಲ್ಲಿ ಮೇಲೆ ಓದಲಾದ (4)ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿ ಮಾತ್ರ ಅನ್ವಯಿಸುವಂತೆ ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟು ಸಂಸ್ಥೆಗಳ ಕಟ್ಟಡ ಖಾಲಿ ಜಾಗ, ಅಂಗಡಿ ಮಳಿಗೆಗಳನ್ನು ಬಹಿರಂಗ ಹರಾಜು ಮಾಡಿ ಗುತ್ತಿಗೆ ನೀಡುವ ಮತ್ತು ಅಂತಹ ಗುತ್ತಿಗೆ ನವೀಕರಿಸುವ ವಿಷಯಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ದಿನಾಂಕ 10–3–2006ರ ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 34 ಬಿಸಿಎ 2004 ರಲ್ಲಿನ ಸೂಚನೆಗಳ ಹಿನ್ನಲೆಯಲ್ಲಿ ಪರಿಶಿಷ್ಠ ಜಾತಿಯವರಿಗೆ ಶೇ. 20 ಮತ್ತು ಪರಿಶಿಷ್ಠ ಪಂಗಡದವರಿಗೆ ಶೇ. 5ರಷ್ಟು ಮೀಸಲಿರಿಸಿ ಆದೇಶಿಸಲಾಗಿದೆ. ಈ ಯೋಜನೆಯನ್ನು ರಾಜ್ಯ ವ್ಯಾಪ್ತಿ ಅನ್ವಯಿಸಬೇಕೆಂದು ಧಾರ್ಮಿಕ ದತ್ತಿ ಆಯುಕ್ತರು ಹಾಗೂ ಕರ್ನಾಟಕ ದಲಿತ ಕೈಗಾರಿಕೋದ್ಯಮಿ ಒಕ್ಕೂಟ ಇವರ ಕೋರಿಕೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 84 ಮುಅಬಿ 2007, ಬೆಂಗಳೂರು, ದಿನಾಂಕ: 14ನೇ ಜುಲೈ 2008.**

ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಸಂಸ್ಥೆಗಳ ಕಟ್ಟಡ, ಖಾಲಿ ಜಾಗ, ಅಂಗಡಿ ಮಳಿಗೆಗಳನ್ನು ಬಹಿರಂಗ ಹರಾಜು ಮಾಡಿ, ಗುತ್ತಿಗೆ ನೀಡುವ ಮತ್ತು ಅಂತಹ ಗುತ್ತಿಗೆ ನವೀಕರಿಸುವ ಸಂಬಂಧ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ

ಪಂಗಡಗಳಿಗೆ ಕ್ರಮವಾಗಿ ಕಲ್ಪಿಸಿರುವ ಶೇ. 20 ಮತ್ತು ಶೇ. 5 ಮೀಸಲಾತಿಯನ್ನು ಕರ್ನಾಟಕ ರಾಜ್ಯ ವ್ಯಾಪ್ತಿಗೆ ಒಳಪಡುವಂತೆ ಅನ್ವಯಿಸಿ, ಕಡ್ಡಾಯವಾಗಿ ಪಾಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1065

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ 2008–09ನೇ ಸಾಲಿಗೆ ರಾಜ್ಯ ಹೆದ್ದಾರಿಗಳ ಮೂರು ವರ್ಷಗಳ ನಿರ್ವಹಣೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ.ರ.ಅ.ನಿ.ನಿ./ವ್ಯ.ನಿ./ 2008–09/574, ದಿನಾಂಕ 20–6–2008.

**ಪ್ರಸ್ತಾವನೆ :**

2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3054–03–337–0–05–200" ರಾಜ್ಯ ಹೆದ್ದಾರಿಗಳ ನಿರ್ವಹಣೆ (ಯೋಜನೇತರ) ಅಡಿಯಲ್ಲಿ ರೂ. 66.00 ಕೋಟಿಗಳನ್ನು ನಿಗಧಿಪಡಿಸಲಾಗಿದೆ.

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ನಿಗಮದ ವತಿಯಿಂದ ಕೈಗೊಳ್ಳಲಾಗಿರುವ 3 ವರ್ಷಗಳ ರಾಜ್ಯ ಹೆದ್ದಾರಿಗಳ ನಿರ್ವಹಣೆ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿಸಲು ರೂ. 15.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 19 ಇಎಪಿ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2008.**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಳ್ಳಲಾಗುತ್ತಿರುವ ರಾಜ್ಯ ಹೆದ್ದಾರಿಗಳ 2005–08 ಮೂರು ವರ್ಷಗಳ ಅವಧಿಯ ನಿರ್ವಹಣೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಲಾಗಿರುವ ರೂ. 66.00 ಕೋಟಿಗಳ ಪೈಕಿ ರೂ. 7.50 (ಏಳು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಕೋಟಿಗಳನ್ನು ಎರಡನೇ ತ್ರೈಮಾಸಿಕದ ಮೊದಲನೇ ಕಂತಾಗಿ ಲೆಕ್ಕಶೀರ್ಷಿಕೆ "3054–03–337–0–05–200 ಯೋಜನೇತರ ಅಡಿಯಲ್ಲಿ" ರಾಜ್ಯ ಹೆದ್ದಾರಿಗಳ ನಿರ್ವಹಣೆಗಾಗಿ ಬಿಡುಗಡೆ ಮಾಡಲಾಗಿದೆ.

2. ಮುಂದುವರೆದು, ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಆಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲು ರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/356/ಆಕೋ.1/08, ದಿನಾಂಕ 10–7–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1064

**ಆರ್. ಮಂಜುಳ**
ವಿಶೇಷಾಧಿಕಾರಿ, ಇಎಪಿ (ಪ್ರ)
ಲೋಕೋಪಯೋಗಿ, ಬಂದರು ಹಾಗೂ ಒಳನಾಡು
ಜಲಸಾರಿಗೆ ಇಲಾಖೆ

## HEALTH AND FAMILY WELFARE SECRETARIAT

**Sub :** Enhancement of upper age limit for admission to Paramedical courses at Medical Training Centre, Command Hospital, Bangalore.

**Read :**
1. Government Order No. HFW 328 MSF 2006, dated 10-11-2006.
2. Letter No. PMB/14/05-06, dated 19-3-2008.

**Preamble:**

In the Paramedical Board Rules issued in Government Order read at (1) above, the upper age limit for admission to Paramedical courses is fixed 35 years for General category candidates and 40 years for SC/ST candidates.

The Chairman, Paramedical Board, Bangalore in his letter read at (2) above has reported that the Air Force candidates will be retiring from service after 20-25 years of safeguarding the nation, some of them are in the age group of 40-50 years who will be retiring, there will be uncertainty after retirement in their life and there are 50 Airmen having S.S.L.C. and P.U.C. Educational qualifications and therefore requested to enhance the upper age limit for admission to Paramedical courses at Medical Training Centre, Command Hospital, Bangalore as a one time measure.

After examining all the concerned documents of the subject the Government have decided to enhance the upper age limit for admission to Paramedical courses at Medical Training Centre, Command Hospital, Bangalore and hence isued this orders.

**Government Order No. HFW 42 MME 2008, Bangalore, Dated 11th July 2008**

The upper age limit of in-service Air Force candidates for admission to paramedical courses at Medical Training Centre, Command Hospital, Agaram Post, Bangalore is fixed as 50 (fifty) years with immediate effect as a one time measure.

By order and in the name of the Governor of Karnataka,

PR. 1056

**V. SREERAMA REDDY**

Under Secretary to Government,

Health & Family Welfare Department.

(Medical Education)

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** 2008–09 ರಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ನಿಗಧಿಪಡಿಸಲಾಗಿರುವ ಬಂಡವಾಳ ವೆಚ್ಚದಡಿಯಲ್ಲಿ ಬಾಕಿ ಇರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಲೋಇ 28 ಇಎಪಿ 2008, ದಿನಾಂಕ 19–4–2008.

2. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ.ರ.ಅ.ನಿ.ನಿ./ವ್ಯ.ನಿ/2008–09/ 0528, ದಿನಾಂಕ 11–6–2008.

**ಪ್ರಸ್ತಾವನೆ :**

ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ, 2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸರ್ಕಾರದಿಂದ ಬಂಡವಾಳ ವೆಚ್ಚದಡಿಯಲ್ಲಿ ನಿಗಧಿಪಡಿಸಲಾಗಿದ್ದ ರೂ. 300.00 ಕೋಟಿ ರೂ.ಗಳಲ್ಲಿ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17ನ್ನು 4 ಪಥದ ರಸ್ತೆಯನ್ನಾಗಿ ಪರಿವರ್ತಿಸುವಲ್ಲಿನ ಬೆಂಗಳೂರು–ಮದ್ದೂರು ಭಾಗದ ಕಾಮಗಾರಿಯನ್ನು ಅನ್ಯೂಟಿ ಆಧಾರದ ಮೇಲೆ ಕೈಗೊಂಡು ಮುಗಿಸಿರುವ ಮೆ: ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿ., ಇವರಿಗೆ 4ನೇ ಕಂತಿನ ಸೆಮಿ ಅನ್ಯೂಟಿ ಮೊತ್ತ 29.70 ಕೋಟಿ ರೂ.ಗಳನ್ನು ಲೆಕ್ಕಶೀರ್ಷಿಕೆ "5054–80–190–0–01–132 ಬಂಡವಾಳ ವೆಚ್ಚ (ಯೋಜನೆ)" ಅಡಿಯಲ್ಲಿ ಪಾವತಿಸಲು ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಓದಲಾದ (2)ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, ಈಗಾಗಲೇ ನಿಗಮದಿಂದ ಕೈಗೊಳ್ಳಲಾಗಿದ್ದು ಪ್ರಗತಿಯಲ್ಲಿರುವ ಕಾಮಗಾರಿಗಳ ಬಿಲ್ಲುಗಳ ಪಾವತಿಗಾಗಿ ಮೇಲಿನ ಲೆಕ್ಕಶೀರ್ಷಿಕೆಯಡಿಯಲ್ಲಿ ಬಾಕಿ ಉಳಿದಿರುವ ರೂ. 225.00 ಕೋಟಿಗಳಲ್ಲಿ ರೂ. 30.00 ಕೋಟಿಗಳ ಮೊತ್ತವನ್ನು ನಿಗಮಕ್ಕೆ ಬಿಡುಗಡೆ ಮಾಡುವಂತೆ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 28 ಇಎಪಿ 2008 ಬೆಂಗಳೂರು, ದಿನಾಂಕ: 8ನೇ ಜುಲೈ 2008.**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 15.00 ಕೋಟಿ ರೂ.ಗಳನ್ನು (ಹದಿನೈದು ಕೋಟಿ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–132 ಬಂಡವಾಳ ವೆಚ್ಚ (ಯೋಜನೆ)" ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು 15.00 ಕೋಟಿ ರೂ.ಗಳ (ಹದಿನೈದು ಕೋಟಿ ರೂಪಾಯಿಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ. 17(ಸಿ) 4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸಿ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ/337 ಆಕೋ–1/2008, ದಿನಾಂಕ 8–7–2008ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1063

**ಆರ್. ಮಂಜುಳ**

ವಿಶೇಷಾಧಿಕಾರಿ, ಇಎಪಿ (ಪ್ರ)

ಲೋಕೋಪಯೋಗಿ, ಬಂದರು ಹಾಗೂ ಒಳನಾಡು

ಜಲಸಾರಿಗೆ ಇಲಾಖೆ

## FOREST, ECOLOGY AND ENVIRONMENT SECRETARIAT

**Sub :** Authorisation to the Deputy Commissioners of the concerned districts to make payment of compensation to victims in case of death, injury, crop damage due to attack by Wild animals.

**Read :** Proceedings of the meeting held on 3-6-2008 under the chairmanship of Principal Secretary to Government, Forest, Ecology and Environment Department.

**Preamble:**

A meeting was held on 3rd June 2008 vide read above to discuss the problems prevailing in the State due to man-elephant conflict in old Mysore region more particularly in Chamarajanagar District. The issue of the timely release of compensation to the families of victims killed or injured by wild animal attacks and as well as payment of compensation for crop damaged by wild animals was discussed as the present system of paying the compensation is being inordinately delayed. It was suggested that the compensation should be quickly settled as and when the incidents occur in the field. The present system of payment through treasury takes its own time as well as due to delays in budget releases and it was decided that the compensation in case of human injuries/death/crop damage due to wild animals be paid by the respective Deputy Commissioners from the funds in their P.D. account/ Calamity Relief Fund and the amount may be reimbursed to the account, from time to time, by the Government, from the budget of the Karnataka Forest Department. This method of payment of compensation by the Deputy Commissioners from funds available in their PD accounts/ Calamity Relief Fund would mitigate the delays and hard ships faced by the victims of wild animal attacks.

Hence, the following order.

**Government Order No. FEE 81 FWL 2008, Bangalore, Dated 11th July 2008**

In the circumstances explained in the preamble, Government is pleased to authorise the Deputy Commissioners of concerned Districts to make payment of compensation in case of death, injury, crop damage due to attack by wild animals out of the funds at their disposal in their P.D. Account/Calamity Relief Fund.

This arrangement is made to enable the District administration to settle claims of death, injury, crop damage caused by wildlife, immediately without any delay, and thereby mitigate the hardship faced by the victims/ families of wild animal attack. The standard procedure of making FIR, mahajar, investigation, autopsy and medical report, crop damage report etc., has to be observed while making the ex-gratia payment.

This expenditure would be reimbursed to the respective Deputy Commissioners, from time to time, by the Government, from the Karnataka Forest Department Head of account 2406-02-110-0-01-Nature conservation of wildlife-015-subsidiary expenses (Wildlife Compensation).

By order and in the name of the Governor of Karnataka,

**H.M. MALLIKARJUNASWAMY**

Under Secretary to Government,

Forest, Ecology and Environment Department.

**Sub :** Constitution of District Level Committees under the chairmanship of the Regional Commissioners to mitigate man-animal conficts and to check poaching of wildlife and electrocution of elephants.

**Read :**
1. Letter No. 2-2/2004-PE dated 13-3-2007 from the IGF and Director (PE), Ministry of Environment and Forest, Government of India, New Delhi.
2. Letters No. C2/WL/CR-67/2005-06, dated 11-4-2007 and 26-12-2007 from the Principals Chief Conservator of Forests (Wildlife), Bangalore.
3. Letter No. 1-1/98 PE dated 17-9-2007 from the IGF and Director (PE), Minsitry of Environment and Forest, Government of India, New Delhi.
4. The proceedings of the meeting held on 3rd June 2008, under the chairmanship of Principal Secretary to Government, Forest, Ecology and Environment Department.

**Preamble:**

1. The Government of India, in their letters read at (1) and (3) above have informed the State Government to constitute a Co-ordination Committee under the Chairmanship of the Regional Commissioner with Field Director, Project Elephant/ Project Tiger as Member Secretary and Deputy Commissioner, Superintendent of Police, Superintending Engineer of Electricity Board etc., as Members for co-ordination and monitoring as there is an increase in the number of death of elephants due to poaching and electrocution in the State.

2. The Principal Chief Conservator of Forests (Wildlife), Bangalore in his letter read at (2) above has informed to the Government that to deal with the man-elephant conflict effectively and especially to save the elephants which is the flagship species of the animal world, inter-departmental co-ordination is very much required at field level and has requested the Government to conduct a high level meeting at the Government level to discuss the above issue with other Departments like Electricity, Revenue, Police, Agricultural, Horticulture, Animal Husbandary and Veternary Services, Legal, Rural Development, etc.

3. Accordingly, a meeting was held on 3rd June 2008 to discuss the issues and it was resolved to constitute District Level Committees under the chairmanship of the Regional Commissioners to mitigate man-animal conflicts and to check prouching/electrocution of wild animals/ elephants.

Hence, the following order.

**Government Order No. FEE 81 FWL 2008, Bangalore, Dated 11th June 2008**

In the circumstances expalined in the preamble, Government is pleased to constitute the following District Level Committee to determine ways and means and take necessary action for mitigation man-animal conflicts and reduce the incidence of poaching of wildlife and electrocution of elephants and to oversee the payment of ex-gratia amounts on deaths, injury and crop damage due to wildlife attack.

| | | |
|---|---|---|
| 1) | Regional Commissioners of concerned Divisions | Chairman |
| 2) | Field Director, Project Tiger | Member |
| 3) | Deputy Commissioner of concerned District | Member |
| 4) | Superintendent of Police of concerned Districts | Member |
| 5) | Chief Electrical Inspector of Government of Karnataka or his nominee | Member |
| 6) | Superintending Engineer of the concerned Electric Supply Company | Member |
| 7) | Deputy Conservator of Forests, Territorial and Social Forestry | Member |
| 8) | Deputy Conservator Forests, Wildlife | Member Secretary |

The local elected representatives as well as representatives of farmers are to be invited for discussions whenever the committee meets.

By order and in the name of the Governor of Karnataka,

PR. 1074

**H.M. MALLIKARJUNASWAMY**
Under Secretary to Government,
Forest, Ecology and Environment Department.

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೋಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ/ಸಂಕದ/ರಶಾ/ಸಇಂ–3/2008–09, ದಿನಾಂಕ 1–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು, ಇವರು ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೋಕಿನಲ್ಲಿ ಅವಶ್ಯವಿರುವ ಈ ಕೆಳಕಂಡ ಒಟ್ಟಾರೆ 127.50 ಕಿ.ಮೀ. ಉದ್ದದ 12 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತ ದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿದೆ ಎಂದು ಮುಖ್ಯ ಇಂಜಿನಿಯರು, ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ವರದಿ ಮಾಡಿರುತ್ತಾರೆ.

| ಕ್ರ ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿಮೀ (ರಸ್ತೆಯ ಉದ್ದ) |
|---|---|---|
| 1 | ಶಿಕಾರಿಪುರ ತಾಲ್ಲೋಕು ಸಾಲೂರು – ಆನಂದಪುರ ರಸ್ತೆಯಿಂದ ಹೋತನ ಕಟ್ಟೆ ಚುಂಚನ ಕೊಪ್ಪ ಮಲ್ಲಾಪುರ – ಮೂಡುಬಸಿದ್ದಾಪುರ – ತ್ಯಾಗರ್ತಿರಸ್ತೆ | 14.00 |
| 2 | ಬಿ.ಬಿ. ರಸ್ತೆ ರಾಜ್ಯ ಹೆದ್ದಾರಿ–57 ರಿಂದ ತರಲಗಟ್ಟ ದೊಡ್ಡ ಜೋಗಿಹಳ್ಳಿ ಚಿಕ್ಕಜೋಗಿಹಳ್ಳಿ ಈಸೂರು ರಸ್ತೆ | 7.00 |
| 3 | ಚಿಕ್ಕಾಪುರ – ಬನ್ನೂರು ಮುಡುಬಸಿದ್ದಾಪುರ –ಅಣ್ಣಾಪುರ, ಡ್ಯಾಮ್ ಹೊಸೂರು ಮುಖಾಂತರ P.CSHI ಸೇರುವ ರಸ್ತೆ | 13.00 |
| 4 | ಸುರಗೀಹಳ್ಳಿಯಿಂದ ಗುಡ್ಡದತುಮ್ಮಿನಕಟ್ಟೆ ಹಿರೇಕೆರೂರು ಗಡಿ ಸೇರುವ ರಸ್ತೆ | 8.00 |
| 5 | ಸಾಲೂರು–ಆನಂದಪುರ ರಸ್ತೆಯಿಂದ ಅರಿಶಿಣಗೇರಿ–ಹಿತ್ತ್ಲ ಅಂಜನಾಪುರ–ಯರೇಕಟ್ಟೆ–ಇಟ್ಟಿಗೇಹಳ್ಳಿ–ಬಾಳೆಕೊಪ್ಪ ಬೇಗೂರು–ಸಂಕ್ಲಾಪುರ ಮುಖಾಂತರ ಶಿಕಾರಿಪುರ ಮಾಸೂರು ರಸ್ತೆ ಸೇರುವ ರಸ್ತೆ | 38.50 |
| 6 | ರಾಜ್ಯ ಹೆದ್ದಾರಿ (1)ರಿಂದ ಕೊಟ್ಟ–ಕಪ್ಪನಹಳ್ಳಿ ಹಿರೇಕಲವತ್ತಿ–ಮಲ್ಲಾಪುರ ರಸ್ತೆ | 10.00 |
| 7 | ಬಿಳಿಕೆ–ಚಿಕ್ಕೇರೂರು ರಸ್ತೆಯಿಂದ ಇನಾಂಮುತ್ತಳ್ಳಿ ಮುಳುಕೊಪ್ಪ–ಕೊರಟಿಗೆರೆ ಮುಖಾಂತರ ಮಲ್ಲೇನಹಳ್ಳಿ ಸೇರುವ ರಸ್ತೆ | 11.00 |
| 8 | ಶಿಕಾರಿಪುರ ತಾ: ಚೋರಡಿ–ಕಲ್ಮನೆ ರಸ್ತೆಯಿಂದ ಚುರ್ಚಿಗುಂಡಿ–ಮತ್ತಿಗಟ್ಟ ಅಂಜನಾಪುರ ರಸ್ತೆ | 8.00 |
| 9 | ಕೆ.ಕೆ. ರಸ್ತೆಯಿಂದ (SH-48) ಕೆಂಚಗೊಂಡನಹಳ್ಳಿ, ವಿಠಲನಗರ – ಗೊಗ್ಗಕಾಗಿನಲ್ಲಿ ನಾಗವಂದ ರಸ್ತೆ | 15.00 |
| 10 | ಸಾಗರ–ಹಿರೇಕೆರೂರು ರಸ್ತೆಯಿಂದ ಕಿಮೀ 4.00 ಮಂಚೀಕೊಪ್ಪ ಹಿರೇಜಂಬೂರು – ಎಸ್.ಎ. ರಸ್ತೆಯಿಂದ ಮಲ್ಲೇನಹಳ್ಳಿ ಸೇರುವ ರಸ್ತೆ (ಮಂಚಿಕೊಪ್ಪ ಹಿರೇಜಂಬೂರು ಸೇರುವ ರಸ್ತೆ | 5.00 |
| 11 | ಕೊಳಗಿ–ಚಿಕ್ಕ ಮಾಗಡಿ ಹಿರೇಕೆರೂರು ರಸ್ತೆಯಿಂದ ಕಣಸೋಗಿ ಬಿಳಕಿ ಸೇರುವ ರಸ್ತೆ | 5.00 |
| 12 | ಕಾಗಿನಲ್ಲಿ ಮಾರವಳ್ಳಿ ರಸ್ತೆಯಿಂದ ಗೊಗ್ಗನ ಹಳ್ಳಿಕೊಪ್ಪ ಸೇರುವ ರಸ್ತೆ | 9.00 |
| | **ಒಟ್ಟು** | **143.50** |

ಮುಖ್ಯ ಇಂಜಿನಿಯರು, ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 370 ಸಿಆರ್‌ಎಂ 08, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2008.**

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಒಟ್ಟಾರೆ 127.50 ಕಿ.ಮೀ. ಉದ್ದದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ ಸಂ. | ಗ್ರಾಮೀಣ ರಸ್ತೆಗಳ ವಿವರ | ಕಿಮೀ (ರಸ್ತೆಯ ಉದ್ದ) |
|---|---|---|
| 1 | ಶಿಕಾರಿಪುರ ತಾಲ್ಲೋಕು ಸಾಲೂರು – ಆನಂದಪುರ ರಸ್ತೆಯಿಂದ ಹೋತನ ಕಟ್ಟೆ ಚುಂಚನ ಕೊಪ್ಪ ಮಲ್ಲಾಪುರ – ಮೂಡುಬಸಿದ್ದಾಪುರ – ತ್ಯಾಗರ್ತಿರಸ್ತೆ | 14.00 |
| 2 | ಬಿ.ಬಿ. ರಸ್ತೆ ರಾಜ್ಯ ಹೆದ್ದಾರಿ–57 ರಿಂದ ತರಲಗಟ್ಟ ದೊಡ್ಡ ಜೋಗಿಹಳ್ಳಿ ಚಿಕ್ಕಜೋಗಿಹಳ್ಳಿ ಈಸೂರು ರಸ್ತೆ | 7.00 |
| 3 | ಚಿಕ್ಕಾಪುರ – ಬನ್ನೂರು ಮುಡುಬಸಿದ್ದಾಪುರ –ಅಣ್ಣಾಪುರ, ಡ್ಯಾಮ್ ಹೊಸೂರು ಮುಖಾಂತರ P.CSHI ಸೇರುವ ರಸ್ತೆ | 13.00 |
| 4 | ಸುರಗೀಹಳ್ಳಿಯಿಂದ ಗುಡ್ಡದತುಮ್ಮಿನಕಟ್ಟೆ ಹಿರೇಕೆರೂರು ಗಡಿ ಸೇರುವ ರಸ್ತೆ | 8.00 |
| 5 | ಸಾಲೂರು–ಆನಂದಪುರ ರಸ್ತೆಯಿಂದ ಅರಿಶಿಣಗೇರಿ–ಹಿತ್ಲ ಅಂಜನಾಪುರ–ಯರೇಕಟ್ಟೆ–ಇಟ್ಟಿಗೇಹಳ್ಳಿ–ಬಾಳೆಕೊಪ್ಪ ಬೇಗೂರು–ಸಂಕ್ಲಾಪುರ ಮುಖಾಂತರ ಶಿಕಾರಿಪುರ ಮಾಸೂರು ರಸ್ತೆ ಸೇರುವ ರಸ್ತೆ | 38.50 |
| 6 | ರಾಜ್ಯ ಹೆದ್ದಾರಿ (1)ರಿಂದ ಕೊಟ್ಟ–ಕಪ್ಪನಹಳ್ಳಿ ಹಿರೇಕಲವತ್ತಿ–ಮಲ್ಲಾಪುರ ರಸ್ತೆ | 10.00 |
| 7 | ಬಿಳಿಕೆ–ಚಿಕ್ಕೇರೂರು ರಸ್ತೆಯಿಂದ ಇನಾಂಮುತ್ತಳ್ಳಿ ಮುಳುಕೊಪ್ಪ–ಕೊರಟಿಗೆರೆ ಮುಖಾಂತರ ಮಲ್ಲೇನಹಳ್ಳಿ ಸೇರುವ ರಸ್ತೆ | 11.00 |
| 8 | ಶಿಕಾರಿಪುರ ತಾ: ಚೋರಡಿ–ಕಲ್ಮನೆ ರಸ್ತೆಯಿಂದ ಚುರ್ಚಿಗುಂಡಿ–ಮತ್ತಿಗಟ್ಟ ಅಂಜನಾಪುರ ರಸ್ತೆ | 8.00 |
| 9 | ಕೆ.ಕೆ. ರಸ್ತೆಯಿಂದ (SH-48) ಕೆಂಚಗೊಂಡನಹಳ್ಳಿ, ವಿಠಲನಗರ – ಗೊಗ್ಗಕಾಗಿನಲ್ಲಿ ನಾಗವಂದ ರಸ್ತೆ | 15.00 |
| 10 | ಸಾಗರ–ಹಿರೇಕೆರೂರು ರಸ್ತೆಯಿಂದ ಕಿಮೀ 4.00 ಮಂಚೀಕೊಪ್ಪ ಹಿರೇಜಂಬೂರು – ಎಸ್.ಎ. ರಸ್ತೆಯಿಂದ ಮಲ್ಲೇನಹಳ್ಳಿ ಸೇರುವ ರಸ್ತೆ (ಮಂಚಿಕೊಪ್ಪ ಹಿರೇಜಂಬೂರು ಸೇರುವ ರಸ್ತೆ | 5.00 |
| 11 | ಕೊಳಗಿ–ಚಿಕ್ಕ ಮಾಗಡಿ ಹಿರೇಕೆರೂರು ರಸ್ತೆಯಿಂದ ಕಣಸೋಗಿ ಬಿಳಕೆ ಸೇರುವ ರಸ್ತೆ | 5.00 |
| 12 | ಕಾಗಿನಲ್ಲಿ ಮಾರವಳ್ಳಿ ರಸ್ತೆಯಿಂದ ಗೊಗ್ಗನ ಹಳ್ಳಿಕೊಪ್ಪ ಸೇರುವ ರಸ್ತೆ | 9.00 |
| | **ಒಟ್ಟು** | **143.50** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1168

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ ಒಳನಾಡು
ಜಲಸಾರಿಗೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 391 ಸಅಸೇ 95 ದಿನಾಂಕ 22–11–1995.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 04 ದಿನಾಂಕ 4–5–2004.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 07, ದಿನಾಂಕ 17–4–2008.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ವಇ 2294 ಪ್ರಕಾ 2008, ದಿನಾಂಕ 4–6–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ 22-11-1995ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ಸೂಪರ್ ಟೈಂ ಸ್ಕೇಲ್‌ನ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಲಾಗಿದೆ. ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮಾತ್ರ ದಿನಾಂಕ 31-3-2009 ರವರೆಗೆ ಮುಂದುವರಿಸುತ್ತಾ ಬರಲಾಗಿದ್ದು, ಆದರೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಾತ್ರ ದಿನಾಂಕ 31-3-2005 ರವರೆಗೆ ಮಾತ್ರ ಮುಂದುವರಿಸಿ ತದನಂತರದಲ್ಲಿ ಮುಂದುವರಿಸಿರುವುದಿಲ್ಲ. ಆದ್ದರಿಂದ ಪ್ರಧಾನ ಕಾರ್ಯದರ್ಶಿ ಆಪ್ತ ಶಾಖೆಯ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 1-4-2005 ರಿಂದ ದಿನಾಂಕ 31-3-2009 ರವರೆಗೆ ಮುಂದುವರಿಸುವಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ 4-6-2008ರ ಅನಧಿಕೃತ ಟಿಪ್ಪಣಿಯಲ್ಲಿ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಕೋರಿದ್ದಾರೆ.

ಪ್ರಧಾನ ಕಾರ್ಯದರ್ಶಿಯವರ ಹುದ್ದೆಯನ್ನು ಕಾಲಕಾಲಕ್ಕೆ ಮುಂದುವರಿಸುತ್ತಾ ಬರಲಾಗಿದ್ದು, ಮೇಲೆ (3)ರಲ್ಲಿ ಓದಲಾದ ದಿನಾಂಕ 17-4-2008ರ ಸರ್ಕಾರಿ ಆದೇಶದಲ್ಲಿ ದಿನಾಂಕ 31-3-2009 ರವರೆಗೆ ಮುಂದುವರಿಸಿ ಆದೇಶಿಸಲಾಗಿದ್ದು, ಆದರೆ, ಪೂರಕ ಸಿಬ್ಬಂದಿ ಹುದ್ದೆಗಳ ಮುಂದುವರಿಕೆಯು ದಿನಾಂಕ 31-3-2005ಕ್ಕೆ ಮುಕ್ತಾಯವಾಗಿದ್ದು, ತದನಂತರ ಮುಂದುವರಿಸಿರುವುದಿಲ್ಲ. ಆದ್ದರಿಂದ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅನಧಿಕೃತ ಟಿಪ್ಪಣಿಯಲ್ಲಿ ಕೋರಿದಂತೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 2007, ಬೆಂಗಳೂರು, ದಿನಾಂಕ: 25ನೇ ಜೂನ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 1-4-2005 ರಿಂದ ದಿನಾಂಕ 31-3-2009 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ (ಶಾಖಾಧಿಕಾರಿ ಹುದ್ದೆ)<br>(ದಿನಾಂಕ 1-4-2005 ರಿಂದ 24-7-2007 ರವರೆಗೆ ಆಪ್ತ ಕಾರ್ಯದರ್ಶಿ ಗ್ರೇಡ್-2 ಹಾಗೂ ದಿನಾಂಕ 25-7-2007 ರಿಂದ ಆಪ್ತ ಕಾರ್ಯದರ್ಶಿ ಗ್ರೇಡ್-1 ಹುದ್ದೆ) | 1 ಹುದ್ದೆ |
| 2 | ಭಾಷಾಂತರಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 ಹುದ್ದೆ |
| 3 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 4 | ಕಿರಿಯ ಸಹಾಯಕ/ಸಹಾಯಕ | 1 ಹುದ್ದೆ |
| 5 | ದಲಾಯತ್ | 2 ಹುದ್ದೆಗಳು |
| 6 | ವಾಹನ ಚಾಲಕ | 1 ಹುದ್ದೆ |
| | **ಒಟ್ಟು** | **8 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-7-1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1028

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3)

**ವಿಷಯ :** ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ:**

1. ದಿನಾಂಕ 13-7-07ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 029 ಎಸ್‌ಇಎನ್ 06
2. ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ 15-3-08ರ ವಿಚಾರಣಾ ವರದಿ ಸಂಖ್ಯೆ: ಸಿಬ್ಬಂದಿ(1)ಇಚೌ:ವಹಿ-86, 2005-06.
3. 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಸಿಆಸುಇ 067 ಕೆಇವಿ 07, ದಿನಾಂಕ 22-5-08.
4. ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಇವರ ದಿನಾಂಕ 10-6-08ರ ಲಿಖಿತ ಉತ್ತರ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಲೋಕಾಯುಕ್ತರು ಇವರ ಮನೆಯನ್ನು ಶೋಧನೆ ಮಾಡಿದ ಸಂಬಂಧವಾಗಿ, ಇವರು ಹಾವೇರಿ ಉಪ ವಿಭಾಗಾಧಿಕಾರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿ, ಹುದ್ದೆಯ ಪ್ರಭಾರವನ್ನು ವಹಿಸಿಕೊಡದೇ, ಕೇಂದ್ರ ಸ್ಥಾನವನ್ನು ಬಿಡುವ ಮೂಲಕ ಹಾಗೂ ನಂತರ ಸರ್ಕಾರಕ್ಕೆ ಬರೆದ ಪತ್ರದಲ್ಲಿ ರಾಜೀನಾಮೆಯನ್ನು ಹಿಂದಕ್ಕೆ ಪಡೆದಿರುವುದಾಗಿ ತಿಳಿಸಿ, ಸದರಿ ಹುದ್ದೆಗೆ ಮಾಡಿದ ಪ್ರಭಾರ ವ್ಯವಸ್ಥೆಯ ಆದೇಶಕ್ಕೆ ಮಾನ್ಯ ಕೆ.ಎ.ಟಿ. ಯಿಂದ ತಡೆಯಾಜ್ಞೆ ಪಡೆದು, ಸರ್ಕಾರದ ಪೂರ್ವಾನುಮತಿ ಇಲ್ಲದೆ ಉಪ ವಿಭಾಗಾಧಿಕಾರಿ, ಹಾವೇರಿ ಹುದ್ದೆಯ ಪ್ರಭಾರವನ್ನು ಸ್ವತಃ ವಹಿಸಿಕೊಂಡು ಸರ್ಕಾರಿ ಕೆಲಸಕಾರ್ಯಗಳಿಗೆ ಅಡಚಣೆಯನ್ನು ಮಾಡಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಯನ್ನು ಉಲ್ಲಂಘಿಸಿ, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗುವ ಮೂಲಕ ಎಸಗಿದ ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ, ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧದ, ಸರ್ಕಾರದ ಪೂರ್ವಾನುಮತಿ ಇಲ್ಲದೆ ಹಾವೇರಿ ಉಪ ವಿಭಾಗಾಧಿಕಾರಿಗಳ ಹುದ್ದೆಯ ಪ್ರಭಾರವನ್ನು ಸ್ವತಃ ವಹಿಸಿಕೊಂಡು ಸರ್ಕಾರಿ ಕೆಲಸ ಕಾರ್ಯಗಳಿಗೆ ತೊಂದರೆಯೊಂಟು ಮಾಡಿ, ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಯನ್ನು ಉಲ್ಲಂಘಿಸಿ, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುವ ಆರೋಪಗಳು ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ದಿನಾಂಕ 22–5–08ರ 2ನೇ ಕಾರಣ ಕೇಳುವ ನೋಟೀಸಿನ ಜೊತೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತರಿಗೆ ಒದಗಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಲಿಖಿತ ಉತ್ತರದಲ್ಲಿ ವಿವರಣೆಯನ್ನು ಪಡೆಯಲಾಗಿದೆ. ವಿಚಾರಣಾ ವರದಿಯನ್ನು ಹಾಗೂ ಅಧಿಕಾರಿಯು ನೀಡಿದ ಉತ್ತರವನ್ನು ಸರ್ಕಾರವು, ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 067 ಕೆಇವಿ 07, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಹೆಚ್. ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ (ಪ್ರಸ್ತುತ ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಬೀದರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ) ಇವರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1173

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಸಣ್ಣ ನೀರಾವರಿ ಇಲಾಖೆಯ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯಲ್ಲಿ ಡೈರೆಕ್ಟರ್ (ಎಂ&ಎ) ಕೇಂದ್ರ ಜಲ ಆಯೋಗ ಬೆಂಗಳೂರುರವರನ್ನು ಸದಸ್ಯರನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಸನೀಇ 166 ಮಸಾವಿ 2007, ದಿನಾಂಕ 21–1–2008.
2. ಡೈರೆಕ್ಟರ್ (ಎಫ್ಎಂಪಿ) ಕೇಂದ್ರ ಜಲ ಆಯೋಗ, Flood Management Planning Directorate, ಭಾರತ ಸರ್ಕಾರ, ನವದೆಹಲಿ ರವರ ಪತ್ರ ಸಂ: 4/43/ಕರ್ನಾಟಕ/2008–ಎಫ್ಎಂಪಿ/1025–28, ದಿನಾಂಕ 3–7–2008.

**ಪ್ರಸ್ತಾವನೆ :**

ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್ ರಚಿಸಲಾಗಿದೆ. ಕೇಂದ್ರ ಜಲ ಆಯೋಗದ ಡೈರೆಕ್ಟರ್

(ಎಫ್‌ಎಂಪಿ) ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 3–7–2008ರ ಪತ್ರದಲ್ಲಿ ಪ್ರವಾಹ ನಿಯಂತ್ರಣ ಕಾರ್ಯಕ್ರಮದಡಿ ಪ್ರವಾಹ ನಿಯಂತ್ರಣ ಮತ್ತು ನದಿ ನಿರ್ವಹಣೆ ಯೋಜನೆಗಳಿಗೆ ಭಾರತ ಸರ್ಕಾರದಿಂದ ರಾಜ್ಯ ಸರ್ಕಾರಗಳಿಗೆ ಸಹಾಯಧನ ಒದಗಿಸುವ ಕುರಿತು ಸದರಿ ಯೋಜನೆಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ತೀರುವಳಿ ಪಡೆಯಬೇಕೆಂಬ ಷರತ್ತನ್ನು ತಿಳಿಸಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯಲ್ಲಿ ಡೈರೆಕ್ಟರ್ (ಎಂ&ಎ) ಕೇಂದ್ರ ಜಲ ಆಯೋಗ, ಬೆಂಗಳೂರು ರವರನ್ನು ಸದಸ್ಯರನ್ನಾಗಿ ನೇಮಿಸಬೇಕೆಂದು ಸಹಾ ತಿಳಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 116 ಮಸಾವಿ 2008, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರವಾಹ ನಿಯಂತ್ರಣ ಕಾರ್ಯಕ್ರಮದಡಿ ಪ್ರವಾಹ ನಿಯಂತ್ರಣ ಮತ್ತು ನದಿ ನಿರ್ವಹಣೆ ಯೋಜನೆಗಳಿಗೆ ರಾಜ್ಯ ಸರ್ಕಾರವು ಭಾರತ ಸರ್ಕಾರದಿಂದ ಸಹಾಯಧನ ಕೋರಲು ತಯಾರಿಸುವ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ತಾಂತ್ರಿಕ ತೀರುವಳಿ ಪಡೆಯುವ ಸಲುವಾಗಿ ಸಣ್ಣ ನೀರಾವರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯಲ್ಲಿ 'ಡೈರೆಕ್ಟರ್ (ಎಂ&ಎ) ಕೇಂದ್ರ ಜಲ ಆಯೋಗ, ಬೆಂಗಳೂರು' ರವರನ್ನು ಅಧಿಕಾರಿ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1124

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ ಚನ್ನರಾಯಪಟ್ಟಣದ ಯೋಜನಾ ಪ್ರಾಧಿಕಾರದ ಸ್ಥಳೀಯ ಯೋಜನಾ ಪ್ರಾಧಿಕಾರವನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ:** ಕಡತ ಸಂಖ್ಯೆ: ನಅಇ 147 ಮೈಅಪ್ರಾ 2008, ದಿನಾಂಕ: 3.5.08 ರಲ್ಲಿ ನಗರ ಯೋಜನಾ ನಿರ್ದೇಶಕರು, ಬೆಂಗಳೂರು ಇವರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಬೆಂಗಳೂರು ಇವರು ಹಾಸನ ಜಿಲ್ಲೆಯ ಚನ್ನರಾಯಪಟ್ಟಣದ ಹಾಲಿ ಜನಸಂಖ್ಯೆಯು 2001 ರ ಜನಗಣತಿಯಂತೆ 35,764 ಗಳಿದ್ದು, 2021 ನೇ ಇಸವಿಗೆ ಹೆಚ್ಚಾಗಬಹುದಾದ 87,000 ಜನಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ಹಾಗೂ ಜನಸಾಂದ್ರತೆಯನ್ನು ಪ್ರತಿ ಹೆಕ್ಟೇರ್‌ಗೆ 100 ಎಂದು ಪರಿಗಣಿಸಿ ಒಟ್ಟು 980 ಹೆಕ್ಟೇರ್ ವಿಸ್ತೀರ್ಣಕ್ಕೆ ಸ್ಥಳೀಯ ಯೋಜನಾ ಪ್ರದೇಶ ನಿಗಧಿಪಡಿಸಲಾಗಿದ್ದು, ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ 9 ಗ್ರಾಮಗಳ ವಿವರಗಳನ್ನೊಳಗೊಂಡ ಅನುಬಂಧ–1 ಹಾಗೂ ಸ್ಥಳೀಯ ಯೋಜನಾ ಪ್ರದೇಶದ ಸರಹದ್ದಿನ ವಿವರಗಳನ್ನೊಳಗೊಂಡ ಅನುಬಂಧ–2 ಅನ್ನು ಸೇರಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, ಕಲಂ 4(ಎ) ರನ್ವಯ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲು ಅಭಿಪ್ರಾಯವನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ನಅಇ 147 ಮೈಅಪ್ರಾ 2008, ಬೆಂಗಳೂರು, ದಿನಾಂಕ: 22ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಚನ್ನರಾಯಪಟ್ಟಣ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ವಿವರಗಳನ್ನು ಅನುಬಂಧ–1 ರಲ್ಲಿ ತೋರಿಸಿರುವಂತೆ 9 ಗ್ರಾಮಗಳು ಸೇರಿ ಅನುಬಂಧ–2 ರಲ್ಲಿನ ಎಲ್ಲೆಯ ವಿವರಣೆಯಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 4(ಎ) ರನ್ವಯ ಚನ್ನರಾಯಪಟ್ಟಣ ಯೋಜನಾ ಪ್ರದೇಶವೆಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಅನುಬಂಧ -I

## ಪ್ರಸ್ತಾವಿತ ಚನ್ನರಾಯಪಟ್ಟಣ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯಲ್ಲಿ ಬರುವ ಗ್ರಾಮಗಳ ವಿವರ

| ಕ್ರಮ ಸಂಖ್ಯೆ | ಗ್ರಾಮದ ಹೆಸರು |
|---|---|
| 1. | ಚನ್ನರಾಯಪಟ್ಟಣ ಗ್ರಾಮ |
| 2. | ಗೂರನಹಳ್ಳಿ ಗ್ರಾಮ |
| 3. | ಅಮಾನಿಕೆರೆ ಗ್ರಾಮ (ಭಾಗಶ:) |
| 4. | ಗೂರಮಾರನಹಳ್ಳಿ ಗ್ರಾಮ (ಭಾಗಶ:) |
| 5. | ಡಿ.ಕಾಳೇನಹಳ್ಳಿ ಗ್ರಾಮ (ಭಾಗಶ:) |
| 6. | ಮಾರೇನಹಳ್ಳಿ ಗ್ರಾಮ (ಭಾಗಶ:) |
| 7. | ಬಿಂಡೇನಹಳ್ಳಿ ಗ್ರಾಮ (ಭಾಗಶ:) |
| 8. | ನಾಗಸಮುದ್ರ ಗ್ರಾಮ (ಭಾಗಶ:) |
| 9. | ಕೆರಚಿಕ್ಕನಹಳ್ಳಿ ಗ್ರಾಮ (ಭಾಗಶ:) |

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಅನುಬಂಧ – II

ಚನ್ನರಾಯಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು, ಉತ್ತರ ದಿಕ್ಕಿನ ಬೆಂಗಳೂರು–ಮಂಗಳೂರು ರಾಷ್ಟ್ರೀಯ ಹೆದ್ದಾರಿ 48 ರಿಂದ ಪ್ರಾರಂಭವಾಗಿ ಪೂರ್ವಾಭಿಮುಖವಾಗಿ ಚಲಿಸಿ, ಕೆರೆಚಿಕ್ಕನಹಳ್ಳಿ ಗ್ರಾಮದ ಗಡಿಯ ಅಂಚಿನಲ್ಲಿಯೇ ಸಾಗಿ ನಾಲೆಯನ್ನು ತಲುಪಿ, ಸ.ನಂ. 38, 33, 29, 28 ನ್ನು ಒಳಗೊಂಡಂತೆ ನಾಲೆಯ ದಕ್ಷಿಣದ ಅಂಚಿನಲ್ಲಿಯೇ ಸಾಗಿ ಗೂರನಹಳ್ಳಿಯ ಗಡಿಯನ್ನು ತಲುಪಿ, ಅಲ್ಲಿಂದ ನಾಲೆಯನ್ನು ಛೇದಿಸಿಕೊಂಡು ಪೂರ್ವಾಭಿಮುಖವಾಗಿ ಗೂರನಹಳ್ಳಿ ಗ್ರಾಮದ ಗಡಿಯಲ್ಲಿಯೇ ಸಾಗಿ ಬಾಗೂರು ರಸ್ತೆ (ಜಿಲ್ಲಾ ಮುಖ್ಯರಸ್ತೆ) ಯನ್ನು ಛೇದಿಸಿ, ಗೂರನಹಳ್ಳಿ ಗ್ರಾಮದ ಈಶಾನ್ಯ ತುದಿಯನ್ನು ತಲುಪಿ, ಅಲ್ಲಿಂದ ದಕ್ಷಿಣಾಭಿಮುಖವಾಗಿ ಗಡಿಯ ಪೂರ್ವದ ಅಂಚಿನಲ್ಲಿಯೇ ಸಾಗಿ ಚನ್ನರಾಯಪಟ್ಟಣ ಗ್ರಾಮದ ಗಡಿಯನ್ನು ತಲುಪಿ, ಚನ್ನರಾಯಪಟ್ಟಣ ಗ್ರಾಮದ ಸ.ನಂ. 4, 5, 6, 9, 10, 36, 41, 45, 50, 46 ನ್ನೊಳಗೊಂಡು ಪೂರ್ವದ ಅಂಚಿನಲ್ಲಿಯೇ ಸಾಗಿ ಅಮಾನಿಕೆರೆ ಗ್ರಾಮದ ಸ.ನಂ. 76, 75, 74 ನ್ನೊಳಗೊಂಡಂತೆ ಸ.ನಂ. 74ರ ಈಶಾನ್ಯ ತುದಿಯನ್ನು ತಲುಪಿ, ಅಲ್ಲಿಂದ ಪೂರ್ವಾಭಿಮುಖವಾಗಿ ಚಲಿಸಿ, ಸ.ನಂ. 73 ರ ಪೂರ್ವದ ಅಂಚಿನಲ್ಲಿಯೇ ಸಾಗಿ ಸ.ನಂ. 57 ನ್ನು ಹೊರತುಪಡಿಸಿ, ಸ.ನಂ. 73, 89, 56, 99, 105, 104, 103 ನ್ನೊಳಗೊಂಡು ಸ.ನಂ. 103 ರ ಈಶಾನ್ಯ ತುದಿಯನ್ನು ತಲುಪಿ, ಗೊರಮಾರನಹಳ್ಳಿ ಗ್ರಾಮದ ಗಡಿಯನ್ನು ತಲುಪುತ್ತದೆ.

ಅಲ್ಲಿಂದ ಪೂರ್ವಾಭಿಮುಖವಾಗಿ ಚಲಿಸಿ, ಗೂರಮಾರನಹಳ್ಳಿ ಗ್ರಾಮದ ಸ.ನಂ. 36, 37, 38, 39, 40, 41, 42, 56, 55, 1, 2, 3, 15, 16 ನ್ನೊಳಗೊಂಡು ಚನ್ನರಾಯಪಟ್ಟಣ–ನುಗ್ಗೇಹಳ್ಳಿ (ಜಿಲ್ಲಾ ಮುಖ್ಯರಸ್ತೆ) ರಸ್ತೆಯನ್ನು ಛೇದಿಸಿಕೊಂಡು ರಸ್ತೆಯ ಪೂರ್ವದ ಅಂಚಿನಲ್ಲಿಯೇ ದಕ್ಷಿಣಾಭಿಮುಖವಾಗಿ ಸಾಗಿ ಸ.ನಂ. 14 ನ್ನೊಳಗೊಂಡಂತೆ ಸ.ನಂ. 14 ರ ಆಗ್ನೇಯ ತುದಿಯನ್ನು ತಲುಪಿ, ಬೆಂಗಳೂರು–ಮಂಗಳೂರು ರಾಷ್ಟ್ರೀಯ ಹೆದ್ದಾರಿಯನ್ನು ಛೇದಿಸಿಕೊಂಡು ರಸ್ತೆಯ ದಕ್ಷಿಣದ ಅಂಚಿನಲ್ಲಿಯೇ ಸಾಗಿ ಸ.ನಂ. 12 ರ ಈಶಾನ್ಯ ತುದಿಯನ್ನು ತಲುಪಿ, ಗೂರಮಾರನಹಳ್ಳಿ ಸ.ನಂ. 12, 57 ನ್ನೊಳಗೊಂಡಂತೆ ದಕ್ಷಿಣಕ್ಕೆ ತಿರುಗಿ ಸ.ನಂ. 57 ರ ಆಗ್ನೇಯ ತುದಿಯನ್ನು ತಲುಪಿ, ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಸ.ನಂ. 57 ರ ದಕ್ಷಿಣದ ಅಂಚಿನಲ್ಲಿಯೇ ಹಾದು ಗೂರಮಾರನಹಳ್ಳಿ ಗ್ರಾಮದ ಸ.ನಂ. 29 ರನ್ನೊಳಗೊಂಡು ದಕ್ಷಿಣಕ್ಕೆ ತಿರುಗಿ ಗೂರಮಾರನಹಳ್ಳಿ ಗ್ರಾಮದ ಸ.ನಂ. 26 ರ ಪೂರ್ವದ ಅಂಚಿನಲ್ಲಿಯೇ ಸಾಗಿ, ಪಶ್ಚಿಮಕ್ಕೆ ತಿರುಗಿ ಸ.ನಂ. 26 ರನ್ನೊಳಗೊಂಡು ಚನ್ನರಾಯಪಟ್ಟಣ–ಶ್ರವಣಬೆಳಗೊಳ (ರಾಜ್ಯ ಹೆದ್ದಾರಿ) ರಸ್ತೆಯನ್ನು ಛೇದಿಸಿ, ಸ.ನಂ. 27 ನ್ನೊಳಗೊಂಡು ಸ.ನಂ. 27 ರ ದಕ್ಷಿಣದ ಅಂಚಿನಲ್ಲಿಯೇ ಸಾಗಿ ಚನ್ನರಾಯಪಟ್ಟಣ ಗ್ರಾಮದ ಸ.ನಂ. 67 ರ ಈಶಾನ್ಯ ತುದಿಯನ್ನು ತಲುಪಿ ಅಲ್ಲಿಂದ ಸ.ನಂ. 67 ರ ಪೂರ್ವದ ಅಂಚಿನಲ್ಲಿಯೇ ಸಾಗಿ ಪಶ್ಚಿಮಕ್ಕೆ ತಿರುಗಿ ಬಿಂಡೇನಹಳ್ಳಿ ರಸ್ತೆಯನ್ನು ತಲುಪಿ ಅಲ್ಲಿಂದ ರಸ್ತೆಯ ಪೂರ್ವದ ಅಂಚಿನಲ್ಲಿಯೇ ದಕ್ಷಿಣಾಭಿಮುಖವಾಗಿ ಸಾಗಿ ರೈಲ್ವೆ ಲೈನನ್ನು ಛೇದಿಸಿಕೊಂಡು ಬಿಂಡೇನಹಳ್ಳಿ ಗ್ರಾಮದ ಸ.ನಂ. 2 ರ ಈಶಾನ್ಯ ತುದಿಯನ್ನು ತಲುಪಿ, ಅಲ್ಲಿಂದ ಪಶ್ಚಿಮಾಭಿಮುಖವಾಗಿ ರೈಲ್ವೆ ಗಡಿಯಲ್ಲಿಯೇ ಸಾಗಿ ಸ.ನಂ. 144 ರ ಈಶಾನ್ಯ ತುದಿಯನ್ನು

ತಲುಪಿ, ಅಲ್ಲಿಂದ ಸ.ನಂ. 144, 122, 124 ನ್ನೊಳಗೊಂಡು ಬಿಂಡೆನಹಳ್ಳಿ ಗ್ರಾಮದ ಸ.ನಂ. 127 ನ್ನು ಛೇದಿಸಿಕೊಂಡು ಅಮಾನಿಕೆರೆ ಗ್ರಾಮದ ಗಡಿಯನ್ನು ತಲುಪಿ, ಅಲ್ಲಿಂದ ಅಮಾನಿಕೆರೆ ಗ್ರಾಮದ ಸ.ನಂ. 217, 213 ನ್ನೊಳಗೊಂಡಂತೆ ದಕ್ಷಿಣದ ಅಂಚಿನಲ್ಲಿಯೇ ಸಾಗಿ ಸ.ನಂ. 213 ರ ನೈರುತ್ಯ ತುದಿಯನ್ನು ತಲುಪಿ, ಅಲ್ಲಿಂದ ಉತ್ತರಾಭಿಮುಖವಾಗಿ ಸಾಗಿ ಅಮಾನಿಕೆರೆ ಗ್ರಾಮದ ಸ.ನಂ. 214, 182, 181, 180, 179, 178 ನ್ನೊಳಗೊಂಡು ಸ.ನಂ. 178 ರ ವಾಯುವ್ಯ ತುದಿಯನ್ನು ತಲುಪಿ ಅಲ್ಲಿಂದ ಪಶ್ಚಿಮಕ್ಕೆ ತಿರುಗಿ, ಸ.ನಂ. 143, 142 ನ್ನೊಳಗೊಂಡು ದಕ್ಷಿಣದ ಅಂಚಿನಲ್ಲಿಯೇ ಸಾಗಿ ಪುನ: ದಕ್ಷಿಣಕ್ಕೆ ತಿರುಗಿ ಅಮಾನಿಕೆರೆ ಗ್ರಾಮದ ಸ.ನಂ. 190, 194 ನ್ನೊಳಗೊಂಡು ಸ.ನಂ. 194 ರ ನೈರುತ್ಯ ತುದಿಯನ್ನು ತಲುಪಿ, ಅಲ್ಲಿಂದ ದಕ್ಷಿಣಾಭಿಮುಖವಾಗಿ ಚಲಿಸಿ, ಡಿ.ಕಾಳೇನಹಳ್ಳಿ ಗ್ರಾಮದ ಸ.ನಂ. 38, 40, 41 ನ್ನೊಳಗೊಂಡು ಸ.ನಂ. 41 ರ ಆಗ್ನೇಯ ತುದಿಯನ್ನು ತಲುಪಿ, ಅಲ್ಲಿಂದ ಪಶ್ಚಿಮಾಭಿಮುಖವಾಗಿ ಚಲಿಸಿ, ಸ.ನಂ. 36, 35, 34, 61, 62 ರ ದಕ್ಷಿಣದ ಅಂಚಿನಲ್ಲಿಯೇ ಸಾಗಿ ಸ.ನಂ. 62 ರ ನೈರುತ್ಯ ತುದಿಯನ್ನು ತಲುಪಿ, ಯಾಚನಹಳ್ಳಿ ರಸ್ತೆಯನ್ನು ಛೇದಿಸಿಕೊಂಡು ದಕ್ಷಿಣಾಭಿಮುಖವಾಗಿ ಸ.ನಂ. 65, 66 ನ್ನೊಳಗೊಂಡು ಸ.ನಂ. 66 ರ ಆಗ್ನೇಯ ತುದಿಯನ್ನು ತಲುಪಿ, ಅಲ್ಲಿಂದ ಡಿ.ಕಾಳೇನಹಳ್ಳಿ ಗ್ರಾಮದ ಗಡಿಯ ದಕ್ಷಿಣದ ಅಂಚಿನಲ್ಲಿಯೇ ಸಾಗಿ, ಮೈಸೂರು ರಸ್ತೆಯನ್ನು (ರಾಜ್ಯ ಹೆದ್ದಾರಿ) ಛೇದಿಸಿ, ಡಿ.ಕಾಳೇನಹಳ್ಳಿ ಗ್ರಾಮದ ದಕ್ಷಿಣದ ಅಂಚಿನಲ್ಲಿಯೇ ಸಾಗಿ ಚನ್ನರಾಯಪಟ್ಟಣ-ಹೊಳೆನರಸೀಪುರ ರಾಜ್ಯ ಹೆದ್ದಾರಿಯನ್ನು ಛೇದಿಸಿಕೊಂಡು ರಾಜ್ಯ ಹೆದ್ದಾರಿಯ ಪಶ್ಚಿಮದ ಅಂಚಿನಲ್ಲಿಯೇ ಉತ್ತರಾಭಿಮುಖವಾಗಿ ಸಾಗಿ ಹೌಸಿಂಗ್ ಬೋರ್ಡ್ ಕಾಲೋನಿ ಒಳಗೊಂಡಂತೆ ಡಿ.ಕಾಳೇನಹಳ್ಳಿ ಗ್ರಾಮದ ಸ.ನಂ. 105 ರ ವಾಯುವ್ಯ ತುದಿಯನ್ನು ತಲುಪುತ್ತದೆ.

ಅಲ್ಲಿಂದ ಪೂರ್ವಾಭಿಮುಖವಾಗಿ ಚಲಿಸಿ, ಮಾರೇನಹಳ್ಳಿ ಗ್ರಾಮದ ಸ.ನಂ. 59 ನ್ನೊಳಗೊಂಡು ಚನ್ನರಾಯಪಟ್ಟಣ-ಹೊಳೆನರಸೀಪುರ ರಸ್ತೆಯ ಉತ್ತರದ ಅಂಚಿನಲ್ಲಿಯೇ ಸಾಗಿ ಸ.ನಂ. 82 ರ ನೈರುತ್ಯ ತುದಿಯನ್ನು ತಲುಪಿ, ಅಲ್ಲಿಂದ ಉತ್ತರಾಭಿಮುಖವಾಗಿ ಚಲಿಸಿ, ಸ.ನಂ. 82, 81 ನ್ನೊಳಗೊಂಡು ಸ.ನಂ. 81 ರ ವಾಯುವ್ಯ ತುದಿಯನ್ನು ತಲುಪಿ, ಅಲ್ಲಿಂದ ಪೂರ್ವಾಭಿಮುಖವಾಗಿ ಸಾಗಿ ಸ.ನಂ. 80, 88 ನ್ನೊಳಗೊಂಡು ಸ.ನಂ. 88 ರ ಈಶಾನ್ಯ ತುದಿಯನ್ನು ತಲುಪಿ, ಅಲ್ಲಿಂದ ಉತ್ತರಾಭಿಮುಖವಾಗಿ ಚಲಿಸಿ, ಸ.ನಂ. 4 ನ್ನೊಳಗೊಂಡಂತೆ ಸ.ನಂ. 4 ರ ವಾಯುವ್ಯ ತುದಿಯನ್ನು ತಲುಪಿ, ಅಲ್ಲಿಂದ ಪೂರ್ವಾಭಿಮುಖವಾಗಿ ಚಲಿಸಿ, ಸ.ನಂ. 6 ರಲ್ಲಿನ ಕೆರೆಯನ್ನು ಒಳಗೊಂಡು ಕೆರೆಯ ನೈರುತ್ಯ ತುದಿಯನ್ನು ತಲುಪಿ, ಅಲ್ಲಿಂದ ಉತ್ತರಾಭಿಮುಖವಾಗಿ ಸಾಗಿ, ರೈಲ್ವೆ ಲೈನನ್ನು ಛೇದಿಸಿ, ನಾಗಸಮುದ್ರ ಗ್ರಾಮದ ಸ.ನಂ. 97, 98, 63, 71, 49, 48 ಕ್ಕೆ ಹೊಂದಿಕೊಂಡಿರುವ ಹಳ್ಳದ ಪಶ್ಚಿಮದ ಅಂಚಿನಲ್ಲಿಯೇ ಸಾಗಿ, ಪಶ್ಚಿಮಕ್ಕೆ ತಿರುಗಿ, ನಾಗಸಮುದ್ರ ಗ್ರಾಮದ ಸ.ನಂ. 53, 138, 139 ನ್ನೊಳಗೊಂಡು ಸ.ನಂ. 141 ರ ನೈರುತ್ಯ ತುದಿಯನ್ನು ತಲುಪಿ, ಅಲ್ಲಿಂದ ಉತ್ತರಾಭಿಮುಖವಾಗಿ ಚಲಿಸಿ, ಸ.ನಂ. 141, 3, 4, 22, 23, 24, 20 ಕೆರೆಚಿಕ್ಕನಹಳ್ಳಿ ಗ್ರಾಮದ ಸ.ನಂ. 37 ನ್ನೊಳಗೊಂಡು ಮಂಗಳೂರು-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯನ್ನು ತಲುಪಿ, ಪಶ್ಚಿಮಕ್ಕೆ ತಿರುಗಿ ರಾಷ್ಟ್ರೀಯ ಹೆದ್ದಾರಿಯ ದಕ್ಷಿಣದ ಅಂಚಿನಲ್ಲಿಯೇ ಮುಂದಕ್ಕೆ ಸಾಗಿ ರಾಷ್ಟ್ರೀಯ ಹೆದ್ದಾರಿಯನ್ನು ಛೇದಿಸಿ, ಪ್ರಾರಂಭಿಕ ಸ್ಥಳವನ್ನು ತಲುಪುತ್ತದೆ.

ಪಿ.ಆರ್. 1114

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ಜಿಲ್ಲೆ, ಮಂಡಿಕಲ್ಲು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕಟ್ಟಡ ನಿರ್ಮಾಣ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಇಡಿ 41 ಯೋಸಕ 2008, ದಿನಾಂಕ 14-3-2008.

2. ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ ಪಪೂಶಿಇ/ಕಟ್ಟಡ/ಎಂಸಿಹೊರನೀ/22/2008-09, ದಿನಾಂಕ 19-5-2008.

**ಪ್ರಸ್ತಾವನೆ :**

(1) ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಮಂಡಿಕಲ್ಲು ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ, ಕಟ್ಟಡ ನಿರ್ಮಾಣಕ್ಕಾಗಿ 36.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿತ್ತು.

(2) ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರು ಚಿಕ್ಕಬಳ್ಳಾಪುರ ಜಿಲ್ಲೆಯ ಮಂಡಿಕಲ್ಲು ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ, ಕಟ್ಟಡ ನಿರ್ಮಾಣಕ್ಕಾಗಿ 36.00 ಲಕ್ಷ ರೂ.ಗಳಿಗೆ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಭೂ ಸೇನಾ ನಿಗಮದಿಂದ ಪಡೆದು ಸರ್ಕಾರಕ್ಕೆ ಸಲ್ಲಿಸಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

(3) ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 130 ಯೋಸಕ 2008, ಬೆಂಗಳೂರು, ದಿನಾಂಕ: 21ನೇ ಜುಲೈ 2008.**

**(ಇಡಿ 155 ಸ್ಪೀಮರ (ಯುನಿಕ್) 2008, ದಿನಾಂಕ 21–7–2008)**

(4) ಚಿಕ್ಕಬಳ್ಳಾಪುರ ಜಿಲ್ಲೆಯ ಮಂಡಿಕಲ್ಲು ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ, ಕಟ್ಟಡ ನಿರ್ಮಾಣದ 36.00 ಲಕ್ಷ ರೂ.ಗಳ (ಮೂವತ್ತಾರು ಲಕ್ಷ ರೂಗಳು ಮಾತ್ರ) ನಕ್ಷೆ ಮತ್ತು ಅಂದಾಜು ಪಟ್ಟಿಗೆ, ಅಂದಾಜು ಮೊತ್ತಕ್ಕೆ ಕಾಮಗಾರಿಯನ್ನು ಪ್ರಚಲಿತವಿರುವ ಕರ್ನಾಟಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೊಳ್ಳುವ ಷರತ್ತನ್ನು ವಿಧಿಸಿ ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

(5) ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಅಧಿಕಾರಿಗಳು ಆಗಿಂದಾಗ್ಗೆ ಪರಿಶೀಲಿಸಲು ಸೂಚಿಸಿದೆ.

(6) ಸದರಿ ಅದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿ.ಇ. 758, ಐ.ಎಫ್. (ಬಿಎ) 2008, ದಿನಾಂಕ 15–7–2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1100

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ),

ಶಿಕ್ಷಣ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಎಸ್‌ಜಿಎಸ್‌ವೈ ಮೊದಲನೇ ಕಂತಿನ ರಾಜ್ಯದ ಪಾಲಿನ ಉಳಿಕೆ ಅನುದಾನವನ್ನು ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ ಜೆ–12022/1/2008–ಎಸ್‌ಜಿಎಸ್‌ವೈ–I(12) ದಿನಾಂಕ 2–4–2008.
2. ಸರ್ಕಾರದ ಆದೇಶ ಸಂ. ಗ್ರಾಅಪ 32 ಎಸ್‌ಜೆವೈ 2008, ದಿನಾಂಕ 12–5–2008.
3. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ–12022/1/2008–ಎಸ್‌ಜಿಎಸ್‌ವೈ–I(39) ದಿನಾಂಕ 22–5–2008.
4. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ ಜೆ–12022/1/2008–ಎಸ್‌ಜಿಎಸ್‌ವೈ–I(63), ದಿನಾಂಕ 26–6–2008.

**ಪ್ರಸ್ತಾವನೆ :**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಓದಲಾದ (1) ಮತ್ತು (2)ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2008–09ನೇ ಸಾಲಿಗೆ (ಒಟ್ಟು ಹಂಚಿಕೆಯ 1/6ನೇ ಭಾಗ) ಒಂದನೇ ಕಂತಿನ ಭಾಗಶಃ ಅನುದಾನವಾಗಿ ರೂ. 13,36,17,000/– ಮತ್ತು 4,45,39,000/–ಗಳನ್ನು ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಅನುಕ್ರಮವಾಗಿ ಬಿಡುಗಡೆ ಮಾಡಲಾಗಿದೆ. ಕೇಂದ್ರ ಸರ್ಕಾರವು ಓದಲಾದ (3) ಮತ್ತು (4)ರ ಪತ್ರಗಳಲ್ಲಿ ಒಂದನೇ ಕಂತಿನ ಉಳಿಕೆ ಅನುದಾನವನ್ನು ರಾಜ್ಯದ ಎಲ್ಲಾ 29 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ. 26,72,27,000ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ. 8,90,75,000ಗಳನ್ನು ಬಿಡುಗಡೆ ಮಾಡಬೇಕಾಗಿದ್ದು, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಆಯವ್ಯಯದಲ್ಲಿ ಒದಗಿಸಿರುವ ಅನುದಾನ ಕಡಿಮೆಯಿರುವುದರಿಂದ, ಅನುದಾನದ ಲಭ್ಯತೆಯ ಆಧಾರದ ಮೇಲೆ ರಾಜ್ಯದ ಎಲ್ಲಾ 29 ಜಿಲ್ಲಾ ಪಂಚಾಯತಿಗಳಿಗೆ ರೂ. 8,76,20,000 ಲಕ್ಷಗಳನ್ನು ಮಾತ್ರ ಬಿಡುಗಡೆ ಮಾಡಲು ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಬಿಡುಗಡೆ ಮಾಡಿರುವ ಮೊದಲನೇ ಕಂತಿನ ಉಳಿಕೆ ಅನುದಾನಕ್ಕೆ ರಾಜ್ಯ ಸರ್ಕಾರ ರೂ. 8,76,20,000/–ಗಳನ್ನು (ರೂ. ಎಂಟು ಕೋಟಿ ಎಪ್ಪತ್ತಾರು ಲಕ್ಷದ ಇಪ್ಪತ್ತು ಸಾವಿರ ಮಾತ್ರ) ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಭಾಗ 1 ಮತ್ತು 2 ರಂತೆ ರಾಜ್ಯದ ಎಲ್ಲಾ 29 ಜಿಲ್ಲಾ ಪಂಚಾಯತಿಗಳಿಗೆ ಕೆಳಕಾಣಿಸಿದ ಷರತ್ತುಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯತಿಗಳ ಅನುದಾನವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯದ ಪಾಲು 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ "2501–ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು–01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09ನೇ (2501–01–198–6–01)" ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–7–2005ರನ್ವಯ ಖಜಾನೆಯಿಂದ ಪಡೆಯುವುದು.

ಬಿಡುಗಡೆ ಮಾಡಿರುವ ಅನುದಾನವನ್ನು ಖಜಾನೆಯಿಂದ ಸೆಳೆಯುವ ಅಧಿಕಾರವನ್ನು ಆಯಾಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗೆ ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ ಗ್ರಾಅಪ 14 ಎಸ್‌ಜೆವೈ 2007, ದಿನಾಂಕ 18–4–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧಿಕಾರಿಗಳು ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಜಿಲ್ಲಾ ಪಂಚಾಯತಿಯ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆಯಾಯ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ)/ ಉಪ ಕಾರ್ಯದರ್ಶಿ ಇವರು ಆಯಾಯ ತಿಂಗಳ ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ, ಪ್ರತಿಯನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ ಇವರಿಗೆ ತಪ್ಪದೇ ಕಳುಹಿಸುವುದು.

ಆಯಾಯ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಾಗೂ ಯೋಜನಾ ನಿರ್ದೇಶಕರು (ಡಿಆರ್‌ಡಿಎ)/ ಉಪ ಕಾರ್ಯದರ್ಶಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಕರ್ನಾಟಕ ಸರ್ಕಾರ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ ಗ್ರಾಅಪ 323 ಪಿಬಿಎಸ್ 2008, ದಿನಾಂಕ 24–7–2008ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು, (ಸ್ವಉಕಾ)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ 29–7–2008**
**(ಅನುಬಂಧ ಭಾಗ 1)**

| ಕ್ರ ಸಂ | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ಉಳಿಕೆ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಬಾಗಲಕೋಟೆ | 461 | 2900zz0001 | 63,07,000 | 21,02,000 |
| 2 | ಬೆಂಗಳೂರು ನಗರ | 401 | 0100zz8001 | 26,85,000 | 8,95,000 |
| 3 | ಬೆಳಗಾವಿ | 413 | 2200zz0002 | 1,86,43,000 | 62,14,000 |
| 4 | ಬಳ್ಳಾರಿ | 418 | 3400zz0001 | 1,48,13,000 | 49,38,000 |
| 5 | ಬೀದರ್ | 419 | 3800zz5701 | 1,04,98,000 | 34,99,000 |
| 6 | ವಿಜಾಪುರ | 414 | 2800zz9152 | 1,23,58,000 | 41,19,000 |
| 7 | ಚಾಮರಾಜನಗರ | 456 | 1000zz0001 | 1,30,81,000 | 43,60,000 |
| 8 | ಚಿಕ್ಕಮಗಳೂರು | 408 | 1800zz0017 | 59,40,000 | 19,80,000 |
| 9 | ಚಿತ್ರದುರ್ಗ | 403 | 1600zz0001 | 1,05,50,000 | 35,17,000 |
| 10 | ದಕ್ಷಿಣ ಕನ್ನಡ | 409 | 1900zz0047 | 57,34,000 | 19,11,000 |
| 11 | ದಾವಣಗೆರೆ | 451 | 1700zz0002 | 85,16,000 | 28,39,000 |
| 12 | ಧಾರವಾಡ | 415 | 2500zz8798 | 53,12,000 | 17,71,000 |
| 13 | ಗದಗ್ | 462 | 2600zz0001 | 84,32,000 | 27,11,000 |
| 14 | ಗುಲ್ಬರ್ಗಾ | 417 | 3200zz0003 | 1,53,57,000 | 51,19,000 |
| 15 | ಹಾಸನ | 410 | 1300zz0003 | 76,97,000 | 25,66,000 |
| 16 | ಹಾವೇರಿ | 463 | 2700zz0001 | 92,08,000 | 30,69,000 |
| 17 | ಕೊಡಗು | 411 | 1200zz0001 | 21,64,000 | 7,21,000 |
| 18 | ಕೊಪ್ಪಳ | 466 | 1500zz0010 | 1,32,48,000 | 44,16,000 |
| 19 | ಮಂಡ್ಯ | 412 | 1100zz0001 | 1,00,21,000 | 33,40,000 |
| 20 | ಮೈಸೂರು | 407 | 0900zz0001 | 1,22,13,000 | 40,71,000 |
| 21 | ರಾಯಚೂರು | 420 | 3600zz0001 | 1,24,76,000 | 41,59,000 |
| 22 | ಶಿವಮೊಗ್ಗ | 405 | 1400zz0002 | 1,06,13,000 | 35,38,000 |
| 23 | ತುಮಕೂರು | 406 | 0800zz0001 | 1,57,31,000 | 52,44,000 |
| 24 | ಉಡುಪಿ | 457 | 2000zz0001 | 46,69,000 | 15,56,000 |
| 25 | ಉತ್ತರ ಕನ್ನಡ | 416 | 3000zz0080 | 66,16,000 | 22,05,000 |
| | **ಒಟ್ಟು** | | | **24,28,82,000** | **8,09,60,000** |

**ಡಾ: ಶಮ್ಲಾ ಇಕ್ಬಾಲ್**
ನಿರ್ದೇಶಕರು, (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು ದಿನಾಂಕ 29–7–2008**

**(ಅನುಬಂಧ ಭಾಗ 2)** **(ರೂ.ಗಳಲ್ಲಿ)**

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ 2–4–08ರ ಪತ್ರದಲ್ಲಿ ಮಾಡಿರುವ | | ರಾಜ್ಯ ಸರ್ಕಾರ 12–5–08ರ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನ | | ಕೇಂದ್ರ ಸರ್ಕಾರ 26–6–08ರ ಪತ್ರದಲ್ಲಿ ಮಾಡಿರುವ | | ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಿದ್ದ ಒಂದನೇ ಕಂತಿನ ಉಳಿಕೆ ಅನುದಾನ | ರಾಜ್ಯದ ಆಯವ್ಯಯದಲ್ಲಿ ಲಭ್ಯತೆಯ ಆಧಾರದ ಮೇಲೆ ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಒಂದನೇ ಕಂತಿನ ಉಳಿಕೆ ಅನುದಾನ |
|---|---|---|---|---|---|---|---|---|---|---|---|
| | | | | ಕೇಂದ್ರದ ಪಾಲಿನ ಹಂಚಿಕೆ | ಒಂದನೇ ಕಂತಿನ ಭಾಗಶಃ ಅನುದಾನ ಬಿಡುಗಡೆ | ಕೇಂದ್ರ | ರಾಜ್ಯ | ಕೇಂದ್ರದ ಪಾಲಿನ ಹಂಚಿಕೆ | ಒಂದನೇ ಕಂತಿನ ಉಳಿಕೆ ಅನುದಾನ ಬಿಡುಗಡೆ | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಬೆಂಗಳೂರು ಗ್ರಾ | 402 | 0300zz8001 | 2,91,35,000 | 48,56,000 | 24,28,000 | 8,09,000 | 1,04,41,000 | 3,65,000 | 9,31,000 | 8,91,000 |
| 2 | ರಾಮನಗರ | 452 | 0400zz0001 | – | – | 24,28,000 | 8,09,000 | 1,86,94,000 | 93,47,000 | 23,06,000 | 8,91,000 |
| 3 | ಕೋಲಾರ | 404 | 0700zz8002 | 4,38,99,000 | 73,17,000 | 36,59,000 | 12,19,000 | 2,32,87,000 | 43,27,000 | 26,62,000 | 26,62,000 |
| 4 | ಚಿಕ್ಕಬಳ್ಳಾಪುರ | 453 | 0600zz0001 | – | – | 36,58,000 | 12,19,000 | 2,06,12,000 | 1,03,06,000 | 22,16,000 | 22,16,000 |
| | | | | **7,30,34,000** | **1,21,73,000** | **1,21,73,000** | **40,56,000** | **7,30,34,000** | **2,43,45,000** | **81,15,00,000** | **66,60,000** |

**ಷರಾ:** (1) ಬೆಂಗಳೂರು ಗ್ರಾಮಾಂತರ – ರೂ. 9,31,000 ಮತ್ತು ರಾಮನಗರ – ರೂ. 23,06,000 ಒಂದನೇ ಕಂತಿನ ಉಳಿಕೆ ಅನುದಾನ ಬಿಡುಗಡೆ ಮಾಡಬೇಕಾಗಿದ್ದು, ರಾಜ್ಯದ ಆಯವ್ಯಯದಲ್ಲಿ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳಿಗೆ ರೂ. 8,91,000 ಲಭ್ಯವಿರುವುದರಿಂದ, ಈ ಪ್ರಕಾರವಾಗಿ ಸದರಿ ಜಿಲ್ಲೆಗಳಿಗೆ ರಾಜ್ಯದ ಆಯವ್ಯಯದಲ್ಲಿ ಅನುದಾನಕ್ಕೆ ಸಮನಾಗಿ ಒಂದನೇ ಕಂತಿನ ಉಳಿಕೆ ಅನುದಾನ ಬಿಡುಗಡೆ ಮಾಡಿದೆ.

(2) ಕೇಂದ್ರ ಸರ್ಕಾರ ದಿನಾಂಕ 26–6–2008ರ ಪತ್ರದಲ್ಲಿ 2008–09ನೇ ಸಾಲಿಗೆ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಬಿಡುಗಡೆ ಮಾಡಿದೆ. ಆದ ಕಾರಣ ದಿನಾಂಕ 12–5–2008ರ ಸರ್ಕಾರದ ಆದೇಶದಲ್ಲಿ ಆದೇಶಿಸಿದಂತೆ ಬೆಂಗಳೂರು ಗ್ರಾಮಾಂತರದಿಂದ ರಾಮನಗರಕ್ಕೆ ನೀಡಿದ್ದ ರೂ. 24,28,000 ಹಾಗೂ ಕೋಲಾರದಿಂದ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ನೀಡಿದ್ದ ರೂ. 36,58,000 ಅನುದಾನವನ್ನು ಪುನಃ ಚೆಕ್ ಮೂಲಕ ಆಯಾಯ ಜಿಲ್ಲಾ ಪಂಚಾಯತಿಗಳಿಗೆ ಹಿಂತಿರುಗಿಸುವಂತೆ ಸೂಚಿಸಿದೆ.

**ಘೋಷ್ವಾರೆ (ಬಿಡುಗಡೆ ಮಾಡಿರುವ ಅನುದಾನ)**

| | | |
|---|---|---|
| ಅನುಬಂಧ ಭಾಗ–1 | 25 ಜಿಲ್ಲೆಗಳಿಗೆ | 8,09,60,000 |
| ಅನುಬಂಧ ಭಾಗ–2 | 4 ಜಿಲ್ಲೆಗಳಿಗೆ | 66,60,000 |
| | **ಒಟ್ಟು ರೂ.** | **8,76,20,000** |

**ಡಾ: ಶಮ್ಲಾ ಇಕ್ಬಾಲ್**
ನಿರ್ದೇಶಕರು, (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1169

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಶಾಸನಬದ್ಧ ಅನುದಾನದ ಎರಡನೇ ತ್ರೈಮಾಸಿಕ ಕಂತನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 129 ಗ್ರಾಪಂಕಾ 2002(3), ದಿನಾಂಕ 2–12–2003.
2. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 234 ಗ್ರಾಪಂಅ 2007, ದಿನಾಂಕ 27–3–2008.
3. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಆಇ 363 ವೆಚ್ಚ–6/2008, ದಿನಾಂಕ 14–5–2008.
4. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 168 ಗ್ರಾಪಂಅ 2008, ದಿನಾಂಕ 20–5–2008.
5. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಆಇ 112 ವೆಚ್ಚ–6/2008, ದಿನಾಂಕ 6–8–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯೀಸ್ ರಸೀದಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಅಧೀನ ಕಾರ್ಯದರ್ಶಿ (ಜಿಪಂ) ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ ರವರಿಗೆ ಸರ್ಕಾರವು ಆದೇಶಿಸಿದೆ.

2008–09ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕಶೀರ್ಷಿಕೆ 2515–00–198–1–07 (ಯೋಜನೆ) ಅಡಿ ಒಟ್ಟಾರೆ ರೂ. 34,219.61 ಲಕ್ಷಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯತಿಗೆ ವಾರ್ಷಿಕವಾಗಿ ತಲಾ ರೂ. 6.00 ಲಕ್ಷಗಳು ಲಭ್ಯವಾಗುತ್ತದೆ. ಈ ಸಾಲಿನ ಮೊದಲನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕಶೀರ್ಷಿಕೆಯಿಂದ ಒಟ್ಟು ರೂ. 8442.00 ಲಕ್ಷಗಳನ್ನು ಆರ್ಥಿಕ ಇಲಾಖೆಯು ಮೇಲೆ ಓದಲಾದ (3)ರಲ್ಲಿನ ಟಿಪ್ಪಣಿಯಲ್ಲಿ ಸಹಮತಿ ನೀಡಿದೆ. ಪ್ರಸ್ತುತ ರಾಜ್ಯದಲ್ಲಿ 5628 ಗ್ರಾಮ ಪಂಚಾಯಿತಿಗಳಿದ್ದು, ಓದಲಾದ (4)ರಲ್ಲಿ ತಿಳಿಸಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ಪ್ರತಿ ಕಂತಿಗೆ ರೂ. 1.50 ಲಕ್ಷಗಳಂತೆ ಒಟ್ಟು ರೂ. 8442.00 ಲಕ್ಷಗಳನ್ನು ಬಿಡುಗಡೆಗೊಳಿಸಿ, ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯ ನಿರ್ವಾಹಕಾಧಿಕಾರಿಗಳ ಮೂಲಕ ಗ್ರಾಮ ಪಂಚಾಯಿತಿಗಳಿಗೆ ವಿತರಿಸಲಾಗಿದೆ. ಓದಲಾದ (5)ರಲ್ಲಿ ತಿಳಿಸಿರುವ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು 2008–09ನೇ ಸಾಲಿನ ಶಾಸನಬದ್ಧ ಅನುದಾನದ 2ನೇ ಕಂತಾಗಿ ರೂ. 8442.00 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಮತಿಸಿರುತ್ತದೆ. ಸದರಿ ಅನುದಾನವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಂತೆ, ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಪ್ರಸ್ತುತ ಗ್ರಾಮ ಪಂಚಾಯಿತಿಗಳ ಜುಲೈ 2008ರಿಂದ ಸೆಪ್ಟೆಂಬರ್ 2008ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 168 ಗ್ರಾಪಂಅ 2008, ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರತಿ ಗ್ರಾಮ ಪಂಚಾಯಿತಿಗೆ 2008–09ನೇ ಸಾಲಿನ ಶಾಸನಬದ್ಧ ಅನುದಾನದ ಎರಡನೇ ತ್ರೈಮಾಸಿಕ ಕಂತಿನ ಮೊತ್ತ ರೂ. 8442.00 ಲಕ್ಷಗಳನ್ನು (ಎಂಟು ಸಾವಿರದ ನಾಲ್ಕು ನೂರ ನಲವತ್ತೆರಡು ಲಕ್ಷ ರೂಪಾಯಿಗಳು) 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ. ಈ ಅನುದಾನದ ಮೊತ್ತವನ್ನು ಪೇಯೀಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ತಲಾ ರೂ. 1.50 ಲಕ್ಷದಂತೆ ಎರಡನೇ ತ್ರೈಮಾಸಿಕ ಕಂತಿನ ಅನುದಾನವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿನ ಷರತ್ತುಗಳನ್ನು ಪಾಲಿಸುವ ನಿಬಂಧನೆಗಳಿಗೊಳಪಟ್ಟು, ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಪ್ರಸ್ತುತ ಗ್ರಾಮ ಪಂಚಾಯಿತಿಗಳ ಜುಲೈ 2008 ರಿಂದ ಸೆಪ್ಟೆಂಬರ್ 2008ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 112 ವೆಚ್ಚ 6/2008, ದಿನಾಂಕ 6–8–2008ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1180

**ಬಿ. ವೀರಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಂ.ಕೆ. ಶೊಲಭೇಶ್ವರಪ್ಪ, ಡಿವೈಎಸ್‌ಪಿ, ದಾವಣಗೆರೆ ಉಪ ವಿಭಾಗ ಮತ್ತು ಶ್ರೀ ಚಂದ್ರಪ್ಪ, ಪಿಎಸ್‌ಐ, ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು ನಗರ ರವರುಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ ಸಿಬಿ(5)39/2008–0)7, ದಿನಾಂಕ 16–6–2008.

**ಪ್ರಸ್ತಾವನೆ :**

ಶ್ರೀ ಎಂ.ಕೆ. ಶೊಲಭೇಶ್ವರಪ್ಪ, ಡಿವೈಎಸ್‌ಪಿ, ದಾವಣಗೆರೆ ಉಪ ವಿಭಾಗ ಇವರು ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರಿನಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀಮತಿ ಗೌರಮ್ಮ ಕೋಂ ವೆಂಕಟರೆಡ್ಡಿ, ಆರ್.ಟಿ. ನಗರ, ಬೆಂಗಳೂರು ಮತ್ತು ಶ್ರೀ ಎಂ. ನಾಗರಾಜ ರೆಡ್ಡಿ ಬಿನ್ ಶ್ರೀ ಮುನಿವೆಂಕಟರೆಡ್ಡಿ, ಆರ್.ಟಿ. ನಗರ, ಇವರುಗಳಿಗೆ ಸೇರಿದ ಜಾಗದಲ್ಲಿ ಶ್ರೀ ಕೆ.ಎಂ. ನಾರಾಯಣ ರೆಡ್ಡಿ ಎಂಬುವವರು ಕಟ್ಟಡದ ಕೆಲಸ ಪ್ರಾರಂಭಿಸಿದ್ದು ಸದರಿ ಪ್ರಕರಣದಲ್ಲಿ ನ್ಯಾಯಾಲಯವು ನೀಡಿರುವ ಇಂಜಂಕ್ಷನ್ ಆರ್ಡರ್‌ನ್ನು ಠಾಣಾಧಿಕಾರಿಗಳಿಗೆ ನೀಡಿ ದಿನಾಂಕ 12–8–2005, 1–9–2005 ಮತ್ತು 6–9–2005ರಲ್ಲಿ ದೂರು ನೀಡಿದರು. ಅರ್ಜಿದಾರರಿಗೆ ಪೊಲೀಸ್ ರಕ್ಷಣೆ ನೀಡದ ಕಾನೂನಿನಂತೆ ಕ್ರಮಕೈಗೊಳ್ಳದೆ ವಿಫಲರಾಗಿರುವುದಾಗಿ ಉಪಲೋಕಾಯುಕ್ತ, ಬೆಂಗಳೂರು ಇವರು ತಿಳಿಸಿರುವ ಹಿನ್ನೆಲೆಯಲ್ಲಿ ಶ್ರೀ ಎಂ.ಕೆ. ಶೊಲಭೇಶ್ವರಪ್ಪ, ಡಿವೈಎಸ್‌ಪಿ, ದಾವಣಗೆರೆ ಉಪ ವಿಭಾಗ ಮತ್ತು ಶ್ರೀ ಚಂದ್ರಪ್ಪ, ಪಿಎಸ್‌ಐ, ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮ 1965/89ರ ನಿಯಮ 6 ಉಪ ನಿಯಮ 2 ಮತ್ತು 8ರನ್ವಯ ಜಂಟಿ ಇಲಖಾ ವಿಚಾರಣೆ ನಡೆಸುವಂತೆ ಡಿ.ಜಿ.ಪಿ.ಯವರು ಶಿಫಾರಸ್ಸು ಮಾಡಿದ್ದಾರೆ. ಈ ದೋಷಾರೋಪಣೆಯ ಬಗೆಗಿನ ದಾಖಲೆಗಳನ್ನು ಒದಗಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 134 ಪೊಸಿಪ 2008, ಬೆಂಗಳೂರು, ದಿನಾಂಕ: 23ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಂ.ಕೆ. ಶೊಲಭೇಶ್ವರಪ್ಪ, ಡಿವೈಎಸ್‌ಪಿ, ದಾವಣಗೆರೆ ಉಪ ವಿಭಾಗ ಮತ್ತು ಶ್ರೀ ಚಂದ್ರಪ್ಪ, ಪಿಎಸ್‌ಐ, ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು ನಗರ ರವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965/89ರ ನಿಯಮ 6 ಉಪ ನಿಯಮ 2 ಮತ್ತು 8 ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಇಲಾಖಾ ವಿಚಾರಣೆಯನ್ನು ನಡೆಸಲು ಅಡಿಷನಲ್ ಎಸ್.ಪಿ. ಚಿತ್ರದುರ್ಗ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿದೆ.

ಈ ಸಂಬಂಧ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧದ ದೋಷಾರೋಪಣೆಯ ಪತ್ರವನ್ನು ಹೊರಡಿಸಲಾಗಿದೆ. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 19 ಸೇಇವಿ 2001 ದಿನಾಂಕ 28–6–2001ರನ್ವಯ ತನಿಖೆ ನಡೆಸಿ ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 3 ತಿಂಗಳೊಳಗಾಗಿ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1097

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PERSONNEL & ADMINISTRATIVE REFORMS SECRETARIAT**

**Sub :** Terms and Conditions of deputation of Sri H.S. Ashokananda, KAS (Selection Grade) Officer as Consultant/Director-Advocacy to University of Manitoa for Karnataka HIV and AIDS Programme, Bangalore-Issue of orders-reg.

**Read :** Notification No. DPAR 89 SKT 07, dated 24-5-2008.

**Govt. Order No. DPAR 89 SKM 07, Bangalore, Dated 8th July 2008**

The following terms and conditions of deputation of Sri H.S. Ashokananda, KAS (Selection Grade) Officer as Consultant/Director-Advocacy to University of Manitoba for Karnataka HIV and AIDS Programme, Bangalore are as follows:

**1. Period of Deputation:** The period of deputation shall be for a period of two years. The Deputation will commerce from the date of relinquishing the charge of the post and it will end on the date of resuming the charge of the post in the Government.

**2. Pay:** During the period of deputation he shall be paid a consolidated pay of CAD $3250 per month with 4% increase in the second year. He will no be eligible for any other allowances including deputation allowances.

**3. Joining time, pay and Transfer Traveling Allowance:** The official will be entitled to Traveling Allowance and Joining time both on joining the post on deputation and on reversion there from to the State Government under the rules of the State Government. The expenditure on this account being borne by the foreign employer.

**4. Traveling Allowance:** The Traveling Allowance for journey on duty during the period of deputation will have to be regulated under the rules of foreign employer.

**5. Medical Facilities:** The University of Manitoba shall afford to Sri H.S. Ashokananda, KAS (Selection Grade) Officer, Medical facilities not inferior to those which he would have enjoyed in the Government Service but for his transfer on deputation. He will not be entitled to claim from the Government of Karnataka, reimbursement of the medical expenses incurred for himself and the members of his family during the period of his deputation with the University of Manitoba at Bangalore.

**6. Disability Leave Salary:** The foreign employer shall be liable to pay to leave salary towards disability leave in respect of disability, if any, incurred in and through deputation with, University of Manitoba at Bangalore even if such disability manifests itself after termination of his deputation with University of Manitoba. The Government of Karnataka will not, bear any liability on this account.

**7. Pension:** During the period of deputation he will continue to be governed by pension Rules of the State Government applicable to him before such deputation.

**8. Leave Salary Contribution:** During his deputation with the University of Manitoba at Bangalore. Sri H.S. Ashokananda, KAS (Selection Grade) Officer will be entitled to leave under the Rules of University of Manitoba and leave salary in respect of leave so granted by the university of Manitoba will also be borne by the University of Manitoba. The period of his deputation with the University of Manitoba will not count towards earned leave and the leave availed of by Sri H.S. Ashokananda, KAS during his deputation with the University of Manitoba at Bangalore will not be debited to his leave account with the Government of Karnataka.

**9. Pension Contribution:** During the period of his deputation Sri H.S. Asokananda, KAS shall pay pension contribution to the Govt. of Karnataka at the following rate and Head of Account.

(a) Pension Contribution: One-eighth of the pay drawn from time to time. 'Pay' for this purpose means pay as defined in G.O. No. FD 37 SRS 87, dated 11th February 1988.

(b) Pension Contribution: 0071 Contributions and Recoveries towards Pension and other retirement benefits-101 subscription and contribution. -03- Contributions recovered from Commercial departments towards pensionary charges 06 Contribution recovered from Local Bodies towards pensionary charges.

(c) During the period of his deputation Sri H.S. Ashokananda, KAS will pay pension contribution annually within fifteen days from the end of each financial year or from the end of foreign servie, if the deputation on foreign service expires before the end of the financial year.

(d) If contributions for pension is not paid within the aforesaid period, the officer shall pay to Government, unless specially exempted by Government, interest on the unpaid contributions at the rate of two paise per day per Rs. 100 from the date of expiry of the said period up to the date on which contributions are finally paid.

**10. Leave Travel Concession:** The official will be entitled to leave Travel concessions and for journey to home town according to the rules of the State Government and shall be paid by the foreign employer.

**11. State Government Employees 'Group Insurance Scheme 1981:** The foreign employer shall remit the amount of suscriptions recovered from the salary of the official under te Scheme by a

Cheque or Demand Draft drawn in favour of concerned authority/head of the parent department with a Schedule in Annexure-A appended to the Karnataka State Employees Group Insurance Scheme Rules 1981 for accounting the same under the relevant Head of Account.

**12. Suscription to Insurance Policy in Karnataka Government Insurance Department/ General Provident Fund:** The Government servant will continue to subscrie to the Insurance policies in Karnataka Government Insurance Department/ General Provident Fund in which he was subscribing at the time of proceeding on deputation to the foreign employer in accordance with the Karnataka Government Insurance Department/ General Provident Fund Rules. The subscription's shall be recovered from the salary of the Officer and credited to the following Head of Account:-

"GPF 8005 – Karnataka State Provident Fund
KGID 8011 – Insurance and Pension Funds
2. Insurance Funds.

**13. Other concessions not specified:** The official shall be entitled to and receive from the foreign employer any other concessions or benefits which he would have received in the ordinary course from the State Government, but for his deputation to the foreign employer.

14. This order issues with the concurrence of Finance Department vide its U.O. Note No. FD/588 Ser-1/08, dated 11-6-2008.

By order and in the name of the Governor of Karnataka,

PR. 1062

**H.R. NAGENDRA**
Under Secretary to Government,
Department of Personnel & Administrative Reforms
(Services-2)

**ಆರ್ಥಿಕ ಸಚಿವಾಲಯ**

**ವಿಷಯ :** ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಆಇ 165 ಸಿಎಸ್‌ಒ 94, ದಿನಾಂಕ 12–12–94.
2. ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 199 ಸಿಎಸ್‌ಎಲ್–2004, ದಿನಾಂಕ 7–9–2004.
3. ಸರ್ಕಾರದ ಆದೇಶ ಸಂಖ್ಯೆ ಆಇ 388 ಸಿಎಸ್‌ಎಲ್ 2005, ದಿನಾಂಕ 30–8–2005.
4. ಸರ್ಕಾರಿ ಆದೇಶ ಸಂಖ್ಯೆ ಆಇ 419 ಸಿಎಸ್‌ಎಲ್ 2006, ದಿನಾಂಕ 7–3–2007.
5. ಸರ್ಕಾರಿ ಆದೇಶ ಸಂಖ್ಯೆ ಆಇ 419 ಸಿಎಸ್‌ಎಲ್ 07, ದಿನಾಂಕ 16–11–2007.
6. ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ ಡಿಸಿಸಿಟಿ (ಹೆಚ್‌ಕ್ಯೂ–1) ಆರ್‌ಇಡಬ್ಲ್ಯೂ/ಸಿಆರ್–06, 95–96, ದಿನಾಂಕ 29–7–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶ ದಿನಾಂಕ 12–12–94ರಲ್ಲಿ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡಿದವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಿಸಿದಂತೆ, ಚಾಲ್ತಿಯಲ್ಲಿದ್ದ ಯೋಜನೆಯನ್ನು ಕೆಲವೊಂದು ಷರತ್ತುಗೊಳಪಡಿಸಿ ಮುಂದುವರಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆದೇಶ ದಿನಾಂಕ 7–9–2004ರಲ್ಲಿ ಈ ಯೋಜನೆಯನ್ನು ಮುಂದುವರಿಸುತ್ತಾ ದಿನಾಂಕ 12–12–94ರ ಆದೇಶದಲ್ಲಿ ನಮೂದಿಸಿರುವ ವಿಧಾನ ಮತ್ತು ಷರತ್ತುಗಳಿಗೊಳಟ್ಟ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ದಿನಾಂಕ 1–4–2004 ರಿಂದ 31–3–2005ರ ವರೆಗೆ ಅವಧಿ ವಿಸ್ತರಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಆದೇಶ ದಿನಾಂಕ 30–8–2005ರಲ್ಲಿ ಈ ಯೋಜನೆಯನ್ನು ದಿನಾಂಕ 1–4–2005 ರಿಂದ ದಿನಾಂಕ 31–3–2006 ರವರೆಗೆ ವಿಸ್ತರಿಸಿ ಆದೇಶ ಹೊರಡಿಸಿದೆ.

ಮೇಲೆ (4)ರಲ್ಲಿ ಓದಲಾದ ಆದೇಶ ದಿನಾಂಕ 7–3–2007ರಲ್ಲಿ ಈ ಯೋಜನೆಯನ್ನು ದಿನಾಂಕ 1–4–2006 ರಿಂದ 31–3–2007 ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 6–11–07ರಲ್ಲಿ ಯೋಜನೆಯನ್ನು ದಿನಾಂಕ 1–4–07 ರಿಂದ 31–3–08 ರವರೆವಿಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (6)ರಲ್ಲಿನ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ಪರಿಷ್ಕೃತ ಯೋಜನೆಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ವಾಣಿಜ್ಯ ತೆರಿಗೆ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಾಲಿ ಇರುವ ಯೋಜನೆಯನ್ನು ಮುಂದುವರಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 419 ಸಿಎಸ್ಎಲ್ 2007, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2008.**

ಸರ್ಕಾರಿ ಆದೇಶ ಸಂಖ್ಯೆ ಆಇ 165 ಸಿಎಸ್ಒ 94 ದಿನಾಂಕ 12–12–94ರಲ್ಲಿ ನಮೂದಿಸಲಾದ ವಿಧಾನ ಮತ್ತು ಷರತ್ತುಗಳಿಗೊಳಪಟ್ಟಂತೆ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಪಟ್ಟ ಯೋಜನೆಯನ್ನು ಬಗ್ಗೆ ದಿನಾಂಕ 1–4–2008 ರಿಂದ 31–3–2009 ರವರೆಗೆ ವಿಸ್ತರಿಸಿ ಆದೇಶಿಸಿದೆ.

ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1182

**ಡಿ.ಆರ್. ಶಶಿಧರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ.1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳಿಗೆ ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು ಇವರ ಸಿ.ಯು.ಜಿ. ನೆಟ್‌ವರ್ಕ್ ಯೋಜನೆಯಡಿಯಲ್ಲಿ ಸಿಮ್ ಕಾರ್ಡ್‌ಗಳ ದರಗಳನ್ನು ಹೆಚ್ಚಿಸಿರುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: HFW/KHSDRP/Sect-59/2007, ಬೆಂಗಳೂರು ದಿನಾಂಕ 18–12–2007.

**ಪ್ರಸ್ತಾವನೆ :**

ಸರ್ಕಾರಿ ಆದೇಶ ಸಂಖ್ಯೆ HFW/KHSDRP/Sect-59/2007, ಬೆಂಗಳೂರು ದಿನಾಂಕ 18–12–2007ರಲ್ಲಿ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ವರ್ಗದವರಿಗೆ ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು ಇವರ ಸಿ.ಯು.ಜಿ. ನೆಟ್‌ವರ್ಕ್ ಯೋಜನೆಯಡಿಯಲ್ಲಿ ಸಿಮ್ ಕಾರ್ಡ್‌ಗಳನ್ನು ಒದಗಿಸಿ, ರೂ. 725.00 ಮತ್ತು ರೂ. 325.00 ದರದಲ್ಲಿ ನಿಗಧಿಪಡಿಸಲಾಗಿತ್ತು.

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ವರ್ಗದವರಿಗೆ ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು ಇವರ ಸಿ.ಯು.ಜಿ. ನೆಟ್‌ವರ್ಕ್ ಯೋಜನೆಯಡಿಯಲ್ಲಿ ಸಿಮ್ ಕಾರ್ಡ್‌ಗಳನ್ನು ಒದಗಿಸಿ, ರೂ. 325.00 ದರದಲ್ಲಿ ನಿಗಧಿಪಡಿಸಲಾಗಿತ್ತು.

ಆದರೆ, ಈ ಅಧಿಕಾರಿ ವರ್ಗದವರು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ ಹಾಗೂ ರಾಷ್ಟ್ರೀಯ ಆರೋಗ್ಯ ಅಭಿಯಾನದ ವತಿಯಿಂದ ರಾಷ್ಟ್ರೀಯ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡುವ ಸಲುವಾಗಿ ತಾಲ್ಲೂಕುವಾರು, ಜಿಲ್ಲಾವಾರು ಅಧಿಕಾರಿಗಳನ್ನು ಕಾರ್ಯಾನುಷ್ಠಾನದ ಬಗ್ಗೆ ದೂರವಾಣಿಯ ಮೂಲಕ ಹೊರ ಮತ್ತು ಒಳ ಕರೆಗಳನ್ನು ಮಾಡಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಹಾಲಿ ನಿಗದಿಪಡಿಸಿರುವ ದರಕ್ಕಿಂತ ಕ್ಲೇಮು ಬಿಲ್ಲುಗಳ ಮೊತ್ತ ಜಾಸ್ತಿ ಇರುವುದು ಗಮನಕ್ಕೆ ಬಂದಿರುತ್ತದೆ ಮತ್ತು ಅನೇಕ ಅಧಿಕಾರಿ ವರ್ಗದವರು ಮೌಖಿಕವಾಗಿ ದರಗಳನ್ನು ಹೆಚ್ಚಿಸಲು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಿಮ್ ಕಾರ್ಡ್‌ಗಳ ದರಗಳನ್ನು ಪರಿಶೀಲಿಸಿ, ಯೋಜನಾ ಕಛೇರಿಯ ಕೆಲಸ ಕಾರ್ಯಗಳು ಸುಗಮವಾಗಿ ನಿರ್ವಹಣೆ ಮಾಡಲು ಮತ್ತು ರಾಷ್ಟ್ರೀಯ ಕಾರ್ಯಕ್ರಮಗಳು ಸಕಾಲಕ್ಕೆ ಅನುಷ್ಠಾನಗೊಳಿಸುವ ಹಿತದೃಷ್ಟಿಯಿಂದ ದರಗಳನ್ನು ಪುನರ್ ಪರಿಷ್ಕರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: HFW/KHSDRP/02/2007-08, ದಿನಾಂಕ: 7ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳನ್ನು ಗಮನಿಸಿ, ದಿನಾಂಕ 1–8–2008 ರಿಂದ ಜಾರಿಗೆ ಬರುವಂತೆ, ಸರ್ಕಾರವು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ ಮತ್ತು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ವರ್ಗದವರಿಗೆ ಅನುಬಂಧ (1) ಮತ್ತು (2)ರಲ್ಲಿ ನಮೂದಿಸಿದಂತೆ ಹಾಲಿ ಇರುವ ಸಿಯುಜಿ ಯೋಜನೆ ದರ ಅಂದರೆ ರೂ. 325.00 (ಮುನ್ನೂರ ಇಪ್ಪತ್ತೈದು ರೂಪಾಯಿ) ಗಳನ್ನು ರೂ. 525.00 (ಐದು ನೂರ ಇಪ್ಪತ್ತೈದು ರೂಪಾಯಿ) ಗಳಿಗೆ ಪುನರ್ ಪರಿಷ್ಕರಿಸಿ, ಸಿ.ಯು.ಜಿ. ನೆಟ್‌ವರ್ಕ್ ಹೊರಗೆ ಕರೆಗಳನ್ನು ಮಾಡಲು ಹೆಚ್ಚುವರಿ ರೂ. 300.00 ಗಳು ಅಂದರೆ ಒಟ್ಟು ರೂ. 825.00 (ಎಂಟು ನೂರು ಇಪ್ಪತ್ತೈದು ರೂಪಾಯಿ)ಗಳಿಗೆ ನಿಗದಿಪಡಿಸಿದೆ.

ಒಂದು ವೇಳೆ ಅನುಮತಿ ನೀಡಿರುವ ಮೊತ್ತಕ್ಕಿಂತ ಹೆಚ್ಚಿನ ಮೊತ್ತ ಪಾವತಿಸಬೇಕಾದಲ್ಲಿ ಆಯಾ ಅಧಿಕಾರಿಗಳು ಸ್ವತಃ ಹೆಚ್ಚುವರಿ ಮೊತ್ತವನ್ನು ಲೆಕ್ಕಶೀರ್ಷಿಕೆ "0210–04–800–0–02 (Miscellaneous Receipt)" ಅಡಿಯಲ್ಲಿ, ತಮ್ಮ ಸ್ವಂತ ಹಣದಿಂದ ಪಾವತಿಸುವುದು.

**ಅನುಬಂಧ–1**

| ಕ್ರಮ ಸಂಖ್ಯೆ | ಪದನಾಮ | ಸಿ.ಯು.ಜಿ. ಯೋಜನೆ | ಪರಿಷ್ಕೃತ ದರ | ನಿಗಧಿಪಡಿಸಿರುವ ಒಟ್ಟು ಮೊತ್ತ |
|---|---|---|---|---|
| 1 | ಮಾನ್ಯ ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | 725.00 | – | Unlimited |
| 2 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | 725.00 | – | Unlimited |
| 3 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | 725.00 | – | Unlimited |
| 4 | ಯೋಜನಾಡಳಿತಾಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ | 725.00 | – | Unlimited |
| 5 | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 725.00 | – | Unlimited |
| 6 | ಯೋಜನಾ ನಿರ್ದೇಶಕರು, ಆರ್.ಸಿ.ಹೆಚ್. | 725.00 | – | Unlimited |
| 7 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | 525.00 | 300.00 | 825.00 |
| 8 | ಮುಖ್ಯ ಆಡಳಿತಾಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 9 | ಉಪ ಕಾರ್ಯದರ್ಶಿಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 10 | ಉಪ ಯೋಜನಾಡಳಿತಾಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 11 | ಮುಖ್ಯ ಹಣಕಾಸು ಅಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 12 | ಜಂಟಿ ನಿರ್ದೇಶಕರುಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 13 | ಉಪ ನಿರ್ದೇಶಕರುಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 14 | ಇಂಜಿನಿಯರಿಂಗ್ ವಿಭಾಗ ಅಧಿಕಾರಿಗಳು (17 ಮಂದಿ), ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 15 | ಲೆಕ್ಕಾಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 16 | ಶಾಖಾಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ | 525.00 | 300.00 | 825.00 |
| 17 | ಜಿಲ್ಲಾ ಯೋಜನಾ ನಿರ್ವಹಣಾಧಿಕಾರಿಗಳು, ಕೆಹೆಚ್ಎಸ್‌ಡಿಆರ್‌ಪಿ & ಎನ್‌ಆರ್‌ಹೆಚ್‌ಎಂ | 525.00 | 300.00 | 825.00 |

**ಅನುಬಂಧ–2**

| ಕ್ರಮ ಸಂಖ್ಯೆ | ಪದನಾಮ | ಸಿ.ಯು.ಜಿ. ಯೋಜನೆ | ಪರಿಷ್ಕೃತ ದರ | ನಿಗಧಿಪಡಿಸಿರುವ ಒಟ್ಟು ಮೊತ್ತ |
|---|---|---|---|---|
| 1 | ಯೋಜನಾ ನಿರ್ದೇಶಕರು, (ಐಡಿಎಸ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 2 | ಅಪರ ನಿರ್ದೇಶಕರು (ಪಿಹೆಚ್) (ಲಾಜಿಸ್ಟಿಕ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 3 | ಜಂಟಿ ನಿರ್ದೇಶಕರುಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 4 | ಮುಖ್ಯ ಆಡಳಿತಾಧಿಕಾರಿಗಳು (ಆರೋಗ್ಯ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |

| ಕ್ರಮ ಸಂಖ್ಯೆ | ಪದನಾಮ | ಸಿ.ಯು.ಜಿ. ಯೋಜನೆ | ಪರಿಷ್ಕೃತ ದರ | ನಿಗಧಿಪಡಿಸಿರುವ ಒಟ್ಟು ಮೊತ್ತ |
|---|---|---|---|---|
| 5 | ಮುಖ್ಯ ಜಾಗೃತ ಕೋಶಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 6 | ಮುಖ್ಯ ಹಣಕಾಸು ಅಧಿಕಾರಿಗಳು & ಹಣಕಾಸು ಸಲಹೆಗಾರರು (ಆರೋಗ್ಯ) & (ಎಫ್‌ಡಬ್ಲ್ಯೂ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 7 | ಡೆಮೋಗ್ರಾಫರ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 8 | ಉಪ ನಿರ್ದೇಶಕರುಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 9 | ತರಬೇತಿ ಅಧಿಕಾರಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 10 | ಆಡಳಿತಾಧಿಕಾರಿಗಳು (ಸಾಮಾನ್ಯ) (ಸಾರಿಗೆ) & (ಕುಟುಂಬ ಕಲ್ಯಾಣ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | 525.00 | 300.00 | 825.00 |
| 11 | ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳು, ಜಿಲ್ಲಾ ಆಸ್ಪತ್ರೆ | 525.00 | 300.00 | 825.00 |
| 12 | ಆರ್‌ಸಿಹೆಚ್ ಅಧಿಕಾರಿಗಳು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ (29 ಮಂದಿ) | 525.00 | 300.00 | 825.00 |
| 13 | ಜಿಲ್ಲಾ ಕ್ಷಯ ರೋಗಾಧಿಕಾರಿಗಳು (29 ಮಂದಿ) | 525.00 | 300.00 | 825.00 |
| 14 | ಜಿಲ್ಲಾ ಸರ್ವೇಲೆನ್ಸ್ ಅಧಿಕಾರಿಗಳು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ (29 ಮಂದಿ) | 525.00 | 300.00 | 825.00 |
| 15 | ರಾಜ್ಯ ಹಣಕಾಸು ವ್ಯವಸ್ಥಾಪಕರು (ಎಸ್‌ಎಫ್‌ಎಂ)– ಎನ್‌ಆರ್‌ಹೆಚ್‌ಎಂ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು | 525.00 | 300.00 | 825.00 |
| 16 | ಲೀಡ್ ಕನ್ಸಲ್ಟೆಂಟ್, ಎನ್‌ಆರ್‌ಹೆಚ್‌ಎಂ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು | 525.00 | 300.00 | 825.00 |
| 17 | ಸಲಹೆಗಾರರು (ಎಂ&ಇ), (ಐಇಸಿ) & (ಎಂಸಿಹೆಚ್), ಎನ್‌ಆರ್‌ಹೆಚ್‌ಎಂ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು | 525.00 | 300.00 | 825.00 |
| 18 | ನಿರ್ದೇಶಕರು, ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ, ಬೆಂಗಳೂರು | 525.00 | 300.00 | 825.00 |
| 19 | ಉಪ ನಿರ್ದೇಶಕರುಗಳು (8 ಮಂದಿ) ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ, ಬೆಂಗಳೂರು | 525.00 | 300.00 | 825.00 |

ಈ ಬಿಲ್ಲಿನಲ್ಲಿ ಬರುವ ಇತರೆ ಸರ್‌ಚಾರ್ಜ್/ ಸೆಸ್ ಇತ್ಯಾದಿ ವೆಚ್ಚ ಸೇರಿಸಿ ಒಟ್ಟು ಬಿಲ್ಲಿನ ವೆಚ್ಚವನ್ನು ಕೆಹೆಚ್‌ಎಸ್‌ಡಿಆರ್‌ಪಿ ಯ ದೂರವಾಣಿ ಲೆಕ್ಕಶೀರ್ಷಿಕೆ 210–06–800–0–81 (ಯೋ) 052 (ದೂರವಾಣಿ ವೆಚ್ಚ) ಅಡಿಯಲ್ಲಿ ಭರಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1184

**ಸುಷಮಾ ಗೋಡಬೋಲೆ**

ಸರ್ಕಾರದ ಉಪ ಕಾರ್ಯದರ್ಶಿ,

ಕೆಹೆಚ್‌ಎಸ್‌ಡಿಆರ್‌ಪಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ENERGY SECRETARIAT**

**No. EN 151 NCE 2008, Bangalore Date 2nd July 2008**

**CORRIGENDUM**

In Government Orders No. EN 290 NCE 2006, dated 16-10-2006 and EN 255 NCE 2007, dated 17-7-2007, wherever the village name appear as "Tallaru village".

**Shall be read as**

"Jarkala village (Forest reserved area)".

By order and in the name of the Governor of Karnataka,

PR. 986

**SURESH B. KRISHNAPPANAVAR**

Under Secretary to Government,

Energy Department.

**ಕಂದಾಯ ಸಚಿವಾಲಯ**

**ವಿಷಯ :** 2008–09ನೇ ಸಾಲಿನಲ್ಲಿ ಪ್ರಕೃತಿ ವಿಕೋಪದಿಂದ ಆಗಿರುವ ಹಾನಿಗೆ ಪರಿಹಾರ ನೀಡಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2008–09ನೇ ಮಾರ್ಚ್ ತಿಂಗಳಿನಲ್ಲಿ ಬಿದ್ದ ಭಾರಿ ಮಳೆಯಿಂದ ಬಾಗಲಕೋಟೆ, ಧಾರವಾಡ, ಗದಗ್, ಬೆಳಗಾವಿ ಜಿಲ್ಲೆಗಳಲ್ಲಿ ಮಾನವ ಜೀವಹಾನಿ, ಪ್ರಾಣಿ ಜೀವಹಾನಿ, ಬೆಳೆ ಹಾನಿ ಮತ್ತು ಮನೆ ಹಾನಿ ಸಂಭವಿಸಿರುತ್ತದೆ ಹಾಗೂ ರಾಜ್ಯದ ಇತರೆ ಜಿಲ್ಲೆಗಳಲ್ಲಿ ಸಹ ಪ್ರಕೃತಿ ವಿಕೋಪದಿಂದ ಹಾನಿ ಆಗಿರುತ್ತದೆ. ರಾಜ್ಯದಲ್ಲಿ ಕೆಲವೊಂದು ಜಿಲ್ಲೆಗಳಲ್ಲಿ ಮಳೆಯ ಕೊರತೆಯಾಗಿ ಕುಡಿಯುವ ನೀರಿನ ಸಮಸ್ಯೆ ಉಂಟಾಗಿದೆ. ತುರ್ತು ಪರಿಹಾರ ಕೈಗೊಳ್ಳಲು ವಿವಿಧ ಜಿಲ್ಲಾಧಿಕಾರಿಗಳು ಅನುದಾನ ಬಿಡುಗಡೆ ಮಾಡುವಂತೆ ಕೋರಿರುವ ಮೇರೆಗೆ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 145 ಟಿ.ಎನ್.ಆರ್. 2008(P1)-1, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪದಿಂದ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಚಾಮರಾಜನಗರ | 50.00 |
| 2 | ಚಿಕ್ಕಮಗಳೂರು | 50.00 |
| 3 | ಚಿತ್ರದುರ್ಗ | 50.00 |
| 4 | ದಾವಣಗೆರೆ | 100.00 |
| 5 | ಧಾರವಾಡ | 100.00 |
| 6 | ಗದಗ್ | 100.00 |
| 7 | ಗುಲ್ಬರ್ಗಾ | 100.00 |
| 8 | ಕೊಪ್ಪಳ | 100.00 |
| 9 | ರಾಯಚೂರು | 100.00 |
| 10 | ಬೆಂಗಳೂರು ಗ್ರಾಮಾಂತರ | 50.00 |
| 11 | ಬೆಂಗಳೂರು ನಗರ | 100.00 |
| 12 | ಬೆಳಗಾಂ | 200.00 |
| 13 | ಬಾಗಲಕೋಟೆ | 100.00 |
| 14 | ಬಳ್ಳಾರಿ | 100.00 |

| | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 15 | ಬಿಜಾಪುರ | 100.00 |
| 16 | ಬೀದರ್ | 100.00 |
| | **ಒಟ್ಟು** | **1500.00** |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕೆಳಕಂಡಂತೆ ಪರಿಹಾರ ಕಾರ್ಯಗಳಿಗೆ ಆದ್ಯತೆ ಮೇಲೆ ಉಪಯೋಗಿಸತಕ್ಕದ್ದು.

1. ಮಾನವ ಹಾನಿ
2. ಜಾನುವಾರು ಹಾನಿ
3. ಕುಡಿಯುವ ನೀರು
4. ಬೆಳೆ ಹಾನಿ
5. ಮನೆ ಹಾನಿ

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್.ಡಿ. 955 ವೆಚ್ಚ–7/08, ದಿನಾಂಕ 1–8–2008ರಲ್ಲಿ ನೀಡಿರುವ ಸಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ವಿಷಯ :** 2008–09ನೇ ಸಾಲಿನಲ್ಲಿ ಕುಡಿಯುವ ನೀರು ಸರಬರಾಜು ಮಾಡಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2008ನೇ ಸಾಲಿನಲ್ಲಿ ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಮಳೆ ಕೊರತೆಯಾಗಿದ್ದು, ಕುಡಿಯುವ ನೀರಿನ ಸಮಸ್ಯೆ ಉದ್ಭವಿಸಿದ್ದು, ತಕ್ಷಣ ಕುಡಿಯುವ ನೀರು ಸರಬರಾಜಿಗೆ ಅನುದಾನ ಬಿಡುಗಡೆ ಮಾಡುವಂತೆ, ಜಿಲ್ಲಾಧಿಕಾರಿಗಳು ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಕುಡಿಯುವ ನೀರು ಸರಬರಾಜು ಮಾಡುವ ಸಲುವಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡ ಅದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 145 ಟಿ.ಎನ್.ಆರ್. 2008(P1)-2, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕುಡಿಯುವ ನೀರಿನ ಸಮಸ್ಯೆ ಇರುವ ಪ್ರದೇಶಗಳಲ್ಲಿ ಕುಡಿಯುವ ನೀರು ಸರಬರಾಜು ಮಾಡುವ ಸಲುವಾಗಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ, ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಚಿಕ್ಕಮಗಳೂರು | 25.00 |
| 2 | ಚಿತ್ರದುರ್ಗ | 25.00 |
| 3 | ದಾವಣಗೆರೆ | 50.00 |
| 4 | ಧಾರವಾಡ | 50.00 |
| 5 | ಗದಗ್ | 50.00 |
| 6 | ಗುಲ್ಬರ್ಗಾ | 100.00 |

| | | |
|---|---|---|
| 7 | ಹಾವೇರಿ | 50.00 |
| 8 | ಕೋಲಾರ | 75.00 |
| 9 | ಕೊಪ್ಪಳ | 100.00 |
| 10 | ಮಂಡ್ಯ | 25.00 |
| 11 | ಮೈಸೂರು | 25.00 |
| 12 | ರಾಯಚೂರು | 50.00 |
| 13 | ರಾಮನಗರ | 25.00 |
| 14 | ಬೆಂಗಳೂರು ಗ್ರಾಮಾಂತರ | 25.00 |
| 15 | ಬೆಂಗಳೂರು ನಗರ | 25.00 |
| 16 | ಬೆಳಗಾಂ | 125.00 |
| 17 | ಬಾಗಲಕೋಟೆ | 75.00 |
| 18 | ಬಳ್ಳಾರಿ | 125.00 |
| 19 | ಬಿಜಾಪುರ | 50.00 |
| 20 | ಬೀದರ್ | 50.00 |
| | **ಒಟ್ಟು** | **1125.00** |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಕುಡಿಯುವ ನೀರು ಸರಬರಾಜಿಗೆ ಮಾತ್ರ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್.ಡಿ. 955 ವೆಚ್ಚ–7/08, ದಿನಾಂಕ 1–8–2008ರಲ್ಲಿ ನೀಡಿರುವ ಸಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1185

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2008–09ನೇ ಸಾಲಿನ ಆಯವ್ಯಯ ಮೊಬಲಗಿನ ಕಂತುಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಇವರ ಪತ್ರ ಸಂಖ್ಯೆ ಕಅಪ್ರಾ/ಕಾ/72/2007–08, ದಿನಾಂಕ 24–4–2008.

**ಪ್ರಸ್ತಾವನೆ :**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2008–09ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಬಾಬ್ತಿನಲ್ಲಿ ರೂ. 48.54 ಲಕ್ಷಗಳನ್ನು ನಿಗಧಿಪಡಿಸಲಾಗಿದೆ. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 24–4–2008ರ ಪತ್ರದಲ್ಲಿ ಪ್ರಾಧಿಕಾರದ ಅಧ್ಯಕ್ಷರ, ಅಧಿಕಾರಿಗಳ/ ನೌಕರರ ವೇತನ, ಪ್ರಯಾಣ ಭತ್ಯೆ, ತುಟ್ಟಿಭತ್ಯೆ, ಇತರೆ ಕಚೇರಿ ವೆಚ್ಚಗಳಿಗೆ ಅಗತ್ಯವಿರುವ ಕಾರಣ ನಿಗಧಿಪಡಿಸಿರುವ ಅನುದಾನದಲ್ಲಿ ಲಭ್ಯವಿರುವ ಕಂತುಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 15 ಕೆಎಎಲ್ 2008, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2008.**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2008–09ನೇ ಸಾಲಿನ ಆಯವ್ಯಯದಲ್ಲಿ ನಿಗದಿಪಡಿಸಿರುವ ಯೋಜನೇತರ ಅನುದಾನ ರೂ. 48.54 ಲಕ್ಷಗಳಲ್ಲಿ ಮೊದಲನೇ ಕಂತು ರೂ. 24.27 ಲಕ್ಷಗಳನ್ನು (ಇಪ್ಪತ್ತನಾಲ್ಕು ಲಕ್ಷದ ಇಪ್ಪತ್ತೇಳು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಯೋಜನೇತರ ಅಯವ್ಯಯ ಲೆಕ್ಕಶೀರ್ಷಿಕೆ 2052–00–092–0–09–101 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ/713/ಐಎಫ್ಎಸ್/2008, ದಿನಾಂಕ 11–7–2008ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1186

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಕೋಲಾರ ಜಿಲ್ಲೆಗಳ ಕಂದಾಯ ಇಲಾಖೆಯ ವಿವಿಧ ವೃಂದಗಳ ನೌಕರರನ್ನು ಹೊಸ ಜಿಲ್ಲೆಗಳಿಗೆ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಂಗಳೂರು ರವರ ಪ್ರಸ್ತಾವನೆ ಸಂಖ್ಯೆ ಸಿಬ್ಬಂದಿ(1)/ಸಿಆರ್/70/08–09, ದಿನಾಂಕ 15–7–2008.

**ಪ್ರಸ್ತಾವನೆ :**

ಸರ್ಕಾರದ ಆದೇಶ ಸಂಖ್ಯೆ ಕಂಇ 27 ಭೂದಾಪು 2006 ದಿನಾಂಕ 3–8–2007ರಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳನ್ನಾಗಿ ಹಾಗೂ ಕೋಲಾರ ಜಿಲ್ಲೆಯನ್ನು ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳನ್ನಾಗಿ ವಿಭಜಿಸಿ ಹೊಸ ಜಿಲ್ಲೆಗಳನ್ನು ಸೃಷ್ಟಿಸಿದ್ದು, ಈ ಜಿಲ್ಲೆಗಳು ದಿನಾಂಕ 23–8–2007 ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ. ಶಿರಸ್ತೇದಾರ್ ಮತ್ತು ಶೀಘ್ರಲಿಪಿಗಾರರ ವೃಂದಗಳು ವಿಭಾಗ ಮಟ್ಟದ ವೃಂದಗಳಾಗಿದ್ದು, ಇವುಗಳನ್ನು ಹೊರತುಪಡಿಸಿ ಉಳಿದಂತಹ ಎಲ್ಲಾ "ಸಿ" ಮತ್ತು "ಡಿ" ವರ್ಗದ ನೌಕರರು ಜಿಲ್ಲಾ ವೃಂದದ ನೌಕರರಾಗಿದ್ದು, ಈ ಹುದ್ದೆಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 7 ರಂತೆ ಜಿಲ್ಲಾಧಿಕಾರಿಗಳು ನೇಮಕಾತಿ ಪ್ರಾಧಿಕಾರಿಗಳಾಗಿರುತ್ತಾರೆ. ಆದುದರಿಂದ ಅವಿಭಜಿತ ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆಗಳಲ್ಲಿನ ಕಂದಾಯ ಇಲಾಖೆಯ "ಸಿ" ಮತ್ತು "ಡಿ" ವೃಂದದ (ಶಿರಸ್ತೇದಾರ್ ಮತ್ತು ಶೀಘ್ರಲಿಪಿಗಾರರನ್ನು ಹೊರತುಪಡಿಸಿ) ನೌಕರರನ್ನು ಆಯಾ ಜಿಲ್ಲಾ ವೃಂದಗಳನ್ನಾಗಿ ವಿಭಜಿಸಿ ಅಧಿಸೂಚಿಸಬೇಕಾದ ಅವಶ್ಯಕತೆ ಇರುತ್ತದೆ. ಈ ರೀತಿಯ ಜಿಲ್ಲಾ ವೃಂದದ ನೌಕರರನ್ನು ವಿಭಜಿಸಿ ಅಧಿಸೂಚನೆ ಹೊರಡಿಸಲು ಬೆಂಗಳೂರು ಪ್ರಾದೇಶಿಕ ಆಯುಕ್ತರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಈ ಕೆಳಕಂಡ ಅಧಿಕಾರಿಗಳ ಒಂದು ಸಮಿತಿ ರಚಿಸುವಂತೆ ಕೋರಿರುತ್ತಾರೆ.

1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು.
2. ಜಿಲ್ಲಾಧಿಕಾರಿಗಳು, ಬೆಂಗಳೂರು, ನಗರ ಮತ್ತು ಗ್ರಾಮಾಂತರ/ ರಾಮನಗರ/ ಕೋಲಾರ ಮತ್ತು ಚಿಕ್ಕಬಳ್ಳಾಪುರ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಹಿಂದಿನ ಅವಿಭಜಿತ ಜಿಲ್ಲೆಗಳ ಜಿಲ್ಲಾ ಮಟ್ಟದ ವೃಂದದ ನೌಕರರನ್ನು ಹೊಸ ಜಿಲ್ಲೆಗಳಿಗೆ ಹಂಚಿಕೆ ಮಾಡಿ ಆಯಾ ಜಿಲ್ಲಾ ವೃಂದಗಳನ್ನಾಗಿ ವಿಭಜಿಸಿ ಅಧಿಸೂಚಿಸಲು ಕ್ರಮ ಕೈಗೊಳ್ಳಬೇಕಾಗಿದ್ದು, ಇದಕ್ಕಾಗಿ ಈ ಕೆಳಕಂಡಂತೆ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 408 ಬಿಎಂಎಂ 2008, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2008.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅವಿಭಜಿತ ಬೆಂಗಳೂರು ನಗರ ಮತ್ತು ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆಗಳ "ಸಿ" ಮತ್ತು "ಡಿ" ವೃಂದದ ನೌಕರರನ್ನು (ಶಿರಸ್ತೇದಾರ್ ಮತ್ತು ಶೀಘ್ರಲಿಪಿಗಾರರನ್ನು ಹೊರತುಪಡಿಸಿ) ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಹಂಚಿಕೆ ಮಾಡಿ, ಹೊಸದಾಗಿ ಜಿಲ್ಲಾ ವೃಂದಗಳನ್ನಾಗಿ ಅಧಿಸೂಚಿಸುವ ಬಗ್ಗೆ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳುವ ಸಲುವಾಗಿ ಈ ಕೆಳಕಂಡ ಸಮಿತಿಯನ್ನು ರಚಿಸಿದೆ.

| | | |
|---|---|---|
| 1. | ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು | ಸದಸ್ಯರು |
| 3 | ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ | ಸದಸ್ಯರು |
| 4 | ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ | ಸದಸ್ಯರು |
| 5 | ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ | ಸದಸ್ಯರು |

ಈ ಸಮಿತಿಯು ಆದಷ್ಟು ಶೀಘ್ರವಾಗಿ ಮೇಲಿನ ಆದೇಶದಂತೆ ಕ್ರಮ ತೆಗೆದುಕೊಂಡು ಈ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–1)

**ಸಂ ಕಂಇ 408, ಬಿಎಂಎಂ 2008, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2008.**

**ತಿದ್ದುಪಡಿ ಆದೇಶ**

ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಕೋಲಾರ ಜಿಲ್ಲೆಗಳ ಕಂದಾಯ ಇಲಾಖೆಯ ವಿವಿಧ ವೃಂದಗಳ ನೌಕರರನ್ನು ಹೊಸ ಜಿಲ್ಲೆಗಳಿಗೆ ಹಂಚಿಕೆ ಮಾಡುವ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ ಕಂಇ 408 ಬಿಎಂಎಂ 2008 ದಿನಾಂಕ 12–8–2008ರ ಆದೇಶ ಭಾಗದ 1 ಮತ್ತು 2ನೇ ಸಾಲಿನಲ್ಲಿರುವ ಬೆಂಗಳೂರು ನಗರ, ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆಗಳ ಸಿ ಮತ್ತು ಡಿ ವೃಂದದ ನೌಕರರುಗಳನ್ನು ಎಂಬುದಾಗಿ ಇರುವ ಪದಗಳನ್ನು "ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆಗಳ ಸಿ ಮತ್ತು ಡಿ ವೃಂದದ ನೌಕರರುಗಳನ್ನು" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1188

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–1)

**ವಸತಿ ಸಚಿವಾಲಯ**

**ವಿಷಯ :** ಐಹೆಚ್‌ಎಸ್‌ಡಿಪಿ ಯೋಜನೆಯಡಿ ರಾಜ್ಯದ 25 ನಗರಗಳ ಕೊಳಚೆ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರ ಹಾಗೂ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 5–7–2008 ರಂದು ನಡೆದ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸಭೆಯ ನಡವಳಿ.
2. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ: ಕಕೊನಿಮ: ಆಯುಕ್ತರು, ತಾಂಶಾ ಐಹೆಚ್‌ಎಸ್‌ಡಿಪಿ/25 ನಗರ/ 2007–08, 339, ದಿನಾಂಕ 18–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ನಡವಳಿಯಂತೆ, ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸಭೆಯಲ್ಲಿ, ಕೇಂದ್ರ ಪ್ರಾಯೋಜಿತ ಐಹೆಚ್‌ಎಸ್‌ಡಿಪಿ ಯೋಜನೆಯಡಿ ಕರ್ನಾಟಕ ರಾಜ್ಯದ 25 ನಗರಗಳ ಕೊಳಚೆ ಪ್ರದೇಶಗಳಲ್ಲಿ 13053 ಮನೆಗಳನ್ನು ಘಟಕ ವೆಚ್ಚ ರೂ. 1.35 ಲಕ್ಷದಂತೆ, 13 ನಗರಗಳ 6529 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ನಿರ್ಮಿಸಿ ಕೇಂದ್ರಕ್ಕೂ ಹಾಗೂ 12 ನಗರದ 6524 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಸುವ ಕಾಮಗಾರಿಯನ್ನು ನಿರ್ಮಿತಿ ಕೇಂದ್ರಕ್ಕೂ ಹಾಗೂ 12 ನಗರದ 6524 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಕೊಳಚೆ ನಿರ್ಮೂಲನ ಮಂಡಳಿಗೂ ವಹಿಸುವ ಬಗ್ಗೆ ನಡವಳಿಯ ವಿಷಯ ಸಂಖ್ಯೆ 3.1 ಮತ್ತು 3.2ರಲ್ಲಿನ ಷರತ್ತಿನನ್ವಯ ಕೈಗೊಳ್ಳಲು ನಿರ್ಣಯಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ಕೇಂದ್ರ ಸರ್ಕಾರ ಪುರಸ್ಕೃತ IHSDP (Integrated Housing Slum Development Programme) ಯೋಜನೆಯಡಿ ಕರ್ನಾಟಕ ರಾಜ್ಯದ 25 ನಗರಗಳ ಕೊಳಚೆ ಪ್ರದೇಶಗಳಲ್ಲಿ 13 ನಗರಗಳ 6529 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ನಿರ್ಮಿತಿ ಕೇಂದ್ರಕ್ಕೆ ಹಾಗೂ 12 ನಗರದ 6524 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಕೊಳಚೆ ನಿರ್ಮೂಲನ ಮಂಡಳಿಗೆ

ವಹಿಸಲು ದಿನಾಂಕ 5–7–2008ರಂದು ನಡೆದ ರಾಜ್ಯ ಮಟ್ಟದ ಅಧಿಕಾರಿಯುಕ್ತ ಸಮಿತಿ ಸಭೆಯಲ್ಲಿ ನಿರ್ಣಯ ಸಂಖ್ಯೆ 3.1 ಮತ್ತು 3.2ರಂತೆ ತೀರ್ಮಾನಿಸಲಾಗಿದ್ದು, ಇದರನ್ವಯ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ಮಿಸಿ ಕೇಂದ್ರ ಹಾಗೂ ಕೊಳಚೆ ನಿರ್ಮೂಲನ ಮಂಡಳಿ ವತಿಯಿಂದ ಕಾಮಗಾರಿಯನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 24 ಕೊಮಂಲೆ 2007, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ದಿನಾಂಕ 5–7–2008ರಂದು ನಡೆದ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸಭೆಯ ನಡವಳಿಯ ವಿಷಯ ಸಂಖ್ಯೆ 3.1 ಮತ್ತು 3.2ರನ್ವಯ 13 ಯೋಜನೆಗಳನ್ನು ಕಾರ್ನಿಕ್ ಮುಖಾಂತರವು ಮತ್ತು 12 ಯೋಜನೆಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಈ ಕೆಳಗಿನ ಪಟ್ಟಿ I ಮತ್ತು II ರಲ್ಲಿನ ವೆಚ್ಚ, ಷರತ್ತಿನಂತೆ, ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

**I–ಕಾರ್ನಿಕ್ ಮುಖಾಂತರ ಕೈಗೊಳ್ಳುವ ಯೋಜನೆಗಳ ವಿವರ ಮತ್ತು ಷರತ್ತು:**

| ಕ್ರಮ ಸಂಖ್ಯೆ | ನಗರಗಳ ಹೆಸರು | ಮನೆಗಳ ಸಂಖ್ಯೆ | ಎಸ್‌ಎಲ್‌ಇಸಿ ನಿರ್ಣಯದಂತೆ (ಘಟಕ ವೆಚ್ಚ 1.35 ಲಕ್ಷ ರೂನಂತೆ) | | |
|---|---|---|---|---|---|
| | | | ವಸತಿ | ಮೂಲಭೂತ ಸೌಲಭ್ಯ | ಒಟ್ಟು |
| 1 | ರಾಮನಗರಂ | 1800 | 2430.00 | 627.87 | 3057.87 |
| 2 | ಮುಳಬಾಗಿಲು | 600 | 810.00 | 315.05 | 1125.05 |
| 3 | ಸವದತ್ತಿ | 145 | 195.75 | 82.98 | 278.73 |
| 4 | ಗಜೇಂದ್ರಘಡ | 500 | 675.00 | 167.83 | 842.83 |
| 5 | ನಂಜನಗೂಡು | 540 | 729.00 | 180.13 | 909.13 |
| 6 | ದೊಡ್ಡಬಳ್ಳಾಪುರ | 648 | 874.80 | 277.83 | 1152.63 |
| 7 | ಬೆಳಗಾಂ | 138 | 186.30 | 113.27 | 299.57 |
| 8 | ಗುಲ್ಬರ್ಗಾ | 786 | 1061.10 | 511.20 | 1572.30 |
| 9 | ಶಹಾಪುರ | 207 | 279.45 | 139.93 | 419.38 |
| 10 | ಕೊಪ್ಪಳ | 265 | 357.75 | 122.16 | 479.91 |
| 11 | ಶಿಡ್ಲಘಟ್ಟ | 200 | 270.00 | 136.34 | 406.34 |
| 12 | ಚಿಂಚೋಳಿ | 200 | 270.00 | 131.07 | 401.07 |
| 13 | ಕಡೂರು | 500 | 675.00 | 430.62 | 1105.62 |
| | **ಒಟ್ಟು** | **6529** | **8814.15** | **3236.23** | **12050.43** |

**ಷರತ್ತು:**

1. ಮೂಲಭೂತ ಸೌಲಭ್ಯಗಳ ಕಾಮಗಾರಿಗೆ ತಗಲುವ ವೆಚ್ಚವು ಕೇಂದ್ರದಿಂದ ಮಂಜೂರಾಗಿರುವ ವೆಚ್ಚವನ್ನು ಮೀರಬಾರದು.
2. ಘಟಕ ವೆಚ್ಚವು ರೂ. 1.35 ಲಕ್ಷದ ಅನುಮೋದಿತ ಮೊತ್ತದೊಳಗಿದ್ದು, ಅನುಮೋದಿತ ತಪಶೀಲು ಪಟ್ಟಿಯಂತೆ (specifications) ಇರತಕ್ಕದ್ದು.
3. ಈಗಾಗಲೇ ತಯಾರಿಸಿರುವ ಡಿಪಿಆರ್ ರಲ್ಲಿನ ವಿವರಗಳು ನಿವೇಶನದ ಹಾಲಿ ಪರಿಸ್ಥಿತಿಗಿಂತ ಭಿನ್ನವಾಗಿರುವ ಸಾಧ್ಯತೆ ಇರುವುದರಿಂದ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಮತ್ತು ನಿರ್ಮಿಸಿ ಕೇಂದ್ರಗಳು ನಿವೇಶನದ ಪರಿಸ್ಥಿತಿಯ ಆಧಾರದ ಮೇಲೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಪ್ರತಿ ಯೋಜನೆಯ ಡಿಪಿಆರ್‌ಗಳನ್ನು ಸಿದ್ದಪಡಿಸಿ ವೆಚ್ಚದ ಮೊತ್ತವನ್ನು ಅಂಶವಾರು ನಮೂದಿಸತಕ್ಕದ್ದು. ಈ ಎಲ್ಲ 13 ನಗರ/ಪಟ್ಟಣಗಳ ಯೋಜನೆಗಳ ಪ್ರಕ್ರಿಯೆಯು 2 ತಿಂಗಳೊಳಗೆ ಪೂರ್ಣಗೊಳ್ಳತಕ್ಕದ್ದು.

4. ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರಿಗೆ ತುರ್ತು ಸಂದರ್ಭಗಳಲ್ಲಿ ಮತ್ತು ಈಗಾಗಲೇ ಉಂಟಾಗಿರುವ ವಿಳಂಬವನ್ನು ತಪ್ಪಿಸಲು ಪರಿಷ್ಕೃತ ಡಿಪಿಆರ್‌ಗಳನ್ನು ಮಂಜೂರು ಮಾಡಿ ಎಸ್‌ಎಲ್‌ಇಸಿಯ ಮಾಹಿತಿಗೆ ಇದನ್ನು ತರಲು ಅಧಿಕಾರ ನೀಡಲಾಗಿದೆ.

**II-ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಮುಖಾಂತರ ಕೈಗೊಳ್ಳುವ ಯೋಜನೆಗಳ ವಿವರ ಮತ್ತು ಷರತ್ತು:**

| ಕ್ರಮ ಸಂಖ್ಯೆ | ನಗರಗಳ ಹೆಸರು | ಮನೆಗಳ ಸಂಖ್ಯೆ | ಎಸ್‌ಎಲ್‌ಇಸಿ ನಿರ್ಣಯದಂತೆ (ಘಟಕ ವೆಚ್ಚ 1.35 ಲಕ್ಷ ರೂನಂತೆ) | | |
|---|---|---|---|---|---|
| | | | ವಸತಿ | ಮೂಲಭೂತ ಸೌಲಭ್ಯ | ಒಟ್ಟು |
| 1 | ಬಳ್ಳಾರಿ | 520 | 702.00 | 254.00 | 956.80 |
| 2 | ಸಿಂಧನೂರು | 1005 | 1356.00 | 700.65 | 2057.40 |
| 3 | ಹಾಸನ | 1000 | 1350.00 | 346.49 | 1696.49 |
| 4 | ಹೊಳೆನರಸೀಪುರ | 1000 | 1350.00 | 346.49 | 1696.49 |
| 5 | ನಾಗಮಂಗಲ | 420 | 567.00 | 153.39 | 720.39 |
| 6 | ಬಸವಕಲ್ಯಾಣ | 170 | 229.00 | 73.70 | 303.20 |
| 7 | ಗೌರಿಬಿದನೂರು (ಮೂಲಸೌಲಭ್ಯ ಮಾತ್ರ) | 000 | 000 | 179.50 | 179.50 |
| 8 | ಬಾಲ್ಕಿ | 150 | 202.50 | 133.42 | 335.92 |
| 9 | ಹುಬ್ಬಳ್ಳಿ | 600 | 810.00 | 446.19 | 1256.19 |
| 10 | ಗದಗ-ಬೆಟಗೇರಿ | 738 | 996.30 | 1051.21 | 2047.51 |
| 11 | ಚಿಂತಾಮಣಿ | 798 | 1077.30 | 683.62 | 1760.92 |
| 12 | ಹಿರಿಯೂರು | 123 | 166.05 | 172.48 | 337.53 |
| | **ಒಟ್ಟು** | **6524** | **8807.40** | **4540.94** | **13348.34** |

**ಷರತ್ತು:**

1. ಘಟಕ ವೆಚ್ಚವು ರೂ. 1.35 ಲಕ್ಷದ ಅನುಮೋದಿತ ಮೊತ್ತದೊಳಗಿದ್ದು, ಅನುಮೋದಿತ ತಪಶೀಲು ಪಟ್ಟಿಯಂತೆ (specifications) ಇರತಕ್ಕದ್ದು.
2. ಕಾಮಗಾರಿಗಳನ್ನು ವಹಿಸುವ ಮುನ್ನ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು, ಟೆಂಡರ್‌ದಾರರ ಮುಕ್ತ ಪಟ್ಟಿಯನ್ನು ಸಿದ್ದಪಡಿಸುವುದು. ಅವಶ್ಯಕತೆ ಬಿದ್ದಲ್ಲಿ ಈ ಕೆಲಸಕ್ಕೆ ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮದ ಸಹಾಯವನ್ನು ಪಡೆಯತಕ್ಕದ್ದು. ಟೆಂಡರ್‌ಗಳನ್ನು ಕರೆಯುವಾಗ, ಪೂರ್ವಾರ್ಹತೆ ಕುರಿತು ಮಾನದಂಡವು (ಎಸ್‌ಎಲ್‌ಇಸಿ) ಅಧ್ಯಕ್ಷರಿಂದ ಅನುಮೋದನೆಗೊಂಡಿರಬೇಕು.
3. ಎಲ್ಲಾ ಮಾಹಿತಿಯನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ/ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮದ ವೆಬ್‌ಸೈಟ್‌ನಲ್ಲಿ ಪ್ರಕಟಿಸತಕ್ಕದ್ದು. ಅಂತಿಮವಾಗಿ ಕೆಲಸವನ್ನು ವಹಿಸುವ ಮುನ್ನ, ಎಸ್‌ಎಲ್‌ಇಸಿಯ ಅನುಮೋದನೆ ಪಡೆದ ನಂತರವೇ ಮಾಡತಕ್ಕದ್ದು.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1190

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ವೈ. ಬಡೇಪ್ಪನವರ, ಸಿ.ಹೆಚ್.ಸಿ.-755, ರಾಣೆಬೆನ್ನೂರ ಗ್ರಾಮೀಣ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾವೇರಿ ಇವರ ಆದೇಶ ಸಂಖ್ಯೆ: ಪಿಆರ್ 89/07, ಓ.ಬಿ.ಸಂ: 389/07, ದಿನಾಂಕ 6-8-2007.

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು 181: ಉವ 07 ದಿನಾಂಕ 8-1-2008.

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 26–12–2007.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ ಅಪೀಲು (2)123 07–08, ದಿನಾಂಕ 5–4–2008.

**ಪ್ರಸ್ತಾವನೆ :**

ಶ್ರೀ ಬಿ.ವೈ. ಬಡೇಪ್ಪನವರ, ಸಿ.ಹೆಚ್.ಸಿ.–755, ರಾಣೆಬೆನ್ನೂರು ಗ್ರಾಮೀಣ ಪೊಲೀಸ್ ಠಾಣೆ, ಹಾವೇರಿ ಜಿಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶಿಸ್ತುಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ರಾಣೆ ಬೆನ್ನೂರು ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿ: 2–2–2007 ರಂದು ದೇವರಗುಡ್ಡ ಗ್ರಾಮದ ಬಂದೋಬಸ್ತ್ ಕರ್ತವ್ಯಕ್ಕೆ ಹೋಗಿದ್ದಾಗ ಬಂದೋಬಸ್ತ್ ಕರ್ತವ್ಯಕ್ಕೆ ಜಿಲ್ಲೆಯ ವಿವಿಧ ಠಾಣೆಯ ಅಧಿಕಾರಿ/ ಸಿಬ್ಬಂದಿಗಳನ್ನು ಸಹ ನೇಮಕ ಮಾಡಲಾಗಿದೆ. ಸುಮಾರು 10.30 ಗಂಟೆಗೆ ನೀವು ಒಂದು ಕಟ್ಟೆಯ ಮೇಲೆ ಕುಳಿತಿದ್ದಾಗ ಕರ್ತವ್ಯದಲ್ಲಿದ್ದ ಪಿ.ಎಸ್.ಐ. ಹಲಗೇರಿ ರವರು ನಿಮಗೆ ಸೌಜನ್ಯದಿಂದ ನಿಮ್ಮ ಕರ್ತವ್ಯ ಎಲ್ಲಿದೆ ಇದ್ದಲ್ಲಿ ಹೋಗಿ ಕರ್ತವ್ಯ ನಿರ್ವಹಿಸಿ ಅಂತ ಹೇಳಿದ್ದಕ್ಕೆ ನೀವು ಪ್ರತಿಯಾಗಿ ನನ್ನ ಕರ್ತವ್ಯ ನೀವೇನು ಕೇಳುತ್ತಿ ನೀನು ಕೂಡ ನನ್ನ ಹಾಗೆ ನೌಕರಿ ಮಾಡಲು ಬಂದಿದ್ದೀಯ ನಿನ್ನದು ಎಷ್ಟು ಇದೆ ಅಷ್ಟು ನೋಡಿಕೊ ಎಂದು ಏಕವಚನದಲ್ಲಿ ಜೋರಾಗಿ ಮಾತನಾಡಿ ಸಾರ್ವಜನಿಕ ಸ್ಥಳದಲ್ಲಿ ಪಿ.ಎಸ್.ಐ. ಹಲಗೇರಿ ರವರಿಗೆ ನಿಂದಿಸಿರುತ್ತೀರಿ, ಅಲ್ಲದೆ ನನ್ನ ನೌಕರಿ ಕೇಳಲು ನಮ್ಮ ಪಿ.ಎಸ್.ಐ. ಇದ್ದಾನೆ ಬೇರೆಯವರಿಂದ ಹೇಳಿಸುವ ಅವಶ್ಯಕತೆ ಇಲ್ಲ ಎಂದು ಮೈಮೇಲೆ ಏರಿ ಹೋಗಿ ಏರು ಧ್ವನಿಯಲ್ಲಿ ಮಾತನಾಡಿ ಮೇಲಾಧಿಕಾರಿಗಳು ಅನ್ನುವ ಪರಿಜ್ಞಾನ ಇಲ್ಲದೆ ವರ್ತಿಇಸಿರುತ್ತೀರಿ. ಮೇಲಾಧಿಕಾರಿಗಳಿಗೆ ಗೌರವ ನೀಡದೆ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ತೀವ್ರ ಅಸಭ್ಯವಾಗಿ ವರ್ತಿಸಿ ಆಧ್ಯ ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾವೇರಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 6–8–2007ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ತಡೆಹಿಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅಭಿಪ್ರಾಯ ಪಡುತ್ತಾ ಶಿಸ್ತು ಪ್ರಾಧಿಕಾರಿಗಳು ದೋಷಾರೋಪಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸದೆ ಇರುವುದರಿಂದ ಶಿಸ್ತು ಪ್ರಾದಿಕಾರಿಗಳು ವಿಧಿಸಿರುವ ದಂಡನೆ ಆದೇಶವನ್ನು ಮಾರ್ಪಡಿಸಿ, ನೌಕರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡಿ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ, ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 8–1–2008ರ ಆದೇಶ ಹೊರಡಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ದಿ: 2–2–2007 ರಂದು ದೇವರಗುಡ್ಡ ಜಾತ್ರೆಯಲ್ಲಿ ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ. ಹಲಗೇರಿ ಪೊಲೀಸ್ ಠಾಣೆ, ಇವರೊಂದಿಗೆ ಏರುದನಿಯಲ್ಲಿ ಮಾತನಾಡಿ ಅಸಭ್ಯವಾಗಿ ವರ್ತಿಸಿದ ಬಗ್ಗೆ ಸಿಪಿಸಿ–938 ಎಂ.ಆರ್. ತೇಗೂರ, ಸಿಪಿಸಿ–1098, ಬಸವರಾಜ ದೇ.ಮಲ್ಲೂರ ಮತ್ತು ಶ್ರೀ ಕೆ.ಡಿ. ಪುಟ್ಟಯ್ಯಾ, ಪಿ.ಎಸ್.ಐ. ಇವರುಗಳು ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ಪಿ.ಎಸ್.ಐ. ಹಲಗೇರಿ ರವರೊಂದಿಗೆ ಏರುದನಿಯಲ್ಲಿ ಮಾತನಾಡಿ ಅಸಭ್ಯವಾಗಿ ವರ್ತಿಸಿದ್ದು ದೃಢಪಡುತ್ತದೆ. ಅಲ್ಲದೇ ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಇವರು ಸಕಾರಣವಿಲ್ಲದೇ ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ಮೇಲೆ ಇಲ್ಲಸಲ್ಲದ ಆರೋಪ ಹೊರಿಸಿ ಮೇಲಾಧಿಕಾರಿಗಳಿಗೆ ವರದಿಯನ್ನು ಸಲ್ಲಿಸುವ ಅಗತ್ಯತೆಯ ಬಗ್ಗೆ ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ಮೇಲೆ ಪಿ.ಎಸ್.ಐ., ರವರು ದುರುದ್ದೇಶದಿಂದ ವರದಿ ಸಲ್ಲಿಸಿರುತ್ತಾರೆ ಎಂದು ಹೇಳುವುದು ಸಮಂಜಸವಾಗಿರುವುದಿಲ್ಲ. ಸದರಿ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ವಿರುದ್ಧ ಪಿ.ಎಸ್.ಐ. ಹಲಗೇರಿರವರು ಘಟನೆ ಘಟಿಸಿದ 12 ದಿನಗಳ ನಂತರ ಶಿಸ್ತು ಪ್ರಾಧಿಕಾರಿಗಳಿಗೆ ದುರುದ್ದೇಶದಿಂದ

ವರದಿಯನ್ನು ಸಲ್ಲಿಸಿರುತ್ತಾರೆ ಎಂಬ ಬಗ್ಗೆ ಯಾವುದೇ ಸ್ಪಷ್ಟ ಸಕಾರಣಗಳನ್ನು ನೀಡದೇ ಇರುವುದರಿಂದ, ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ವಾದವು ಸಮಂಜಸವಾಗಿರುವುದಿಲ್ಲ. ಅದರಂತೆ ಶಿಸ್ತು ಪ್ರಾಧಿಕಾರಿಗಳು ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ವಿರುದ್ಧ ಕೆ.ಎಸ್.ಪಿ. (ಡಿಪಿ) ನಿಯಮಗಳು, 1965/1989ರ ನಿಯಮ 7ರ ಅಡಿಯಲ್ಲಿ ಶಿಸ್ತು ಕ್ರಮ ಜರುಗಿಸಿರುತ್ತಾರೆ. ಮೇಲ್ಮನವಿಯಲ್ಲಿ ಅರ್ಜಿದಾರರು ಮಂಡಿಸಿರುವ ಅಂಶಗಳು ಸಮಂಜಸವಾಗಿರುವುದಿಲ್ಲ.

ಮೇಲ್ಮನವಿ ಪ್ರಾಧಿಕಾರವು ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ, ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ಹಾಗೂ ದಿ: 17-2-2007 ರಿಂದ 30-6-2007ರ ವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ ಆದೇಶ ಹೊರಡಿಸಿರುತ್ತಾರೆ. ಮೇಲೆ ತಿಳಿಸಿದ ಕಾರಣಗಳಿಂದ ಇದನ್ನು ಮಾರ್ಪಡಿಸಲು ಯಾವುದೇ ಸಮಂಜಸ ದಾಖಲೆಗಳು ಅಥವಾ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು/ ಅಪೀಲು ಪ್ರಾಧಿಕಾರಿಗಳು ವಿಧಿಸಿರುವ ದಂಡನೆ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 140 ಪೊಸಿಅ 2008, ಬೆಂಗಳೂರು, ದಿನಾಂಕ: 26ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ವೈ. ಬಡೇಪ್ಪನವರ, ಸಿ.ಹೆಚ್.ಸಿ.-755, ರಾಣೆಬೆನ್ನೂರ ಗ್ರಾಮೀಣ ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ ಇವರ ಆದೇಶ ಸಂಖ್ಯೆ: ಸಿಬ್ಬಂದಿ 6 ಸಿ.ಆರ್.-50, 2004-05, 582 ದಿನಾಂಕ 23-2-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಹಿಂಬರಹ ಸಂಖ್ಯೆ ಅಪೀಲು 149 ಉವ 2007, ದಿನಾಂಕ 14-5-2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 29-6-2007.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ ಅಪೀಲು (2) 51, 2007-08, ದಿನಾಂಕ 21-5-2008.

**ಪ್ರಸ್ತಾವನೆ :**

ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ ಅಣ್ಣಿಗೇರಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಗುನ್ನಾ ಸಂ. 84/04, ಕಲಂ 341, 143, 504, 353, 427 ಸಹಕಲಂ 149 ಐಪಿಸಿ ಪ್ರಕರಣವು ದಿನಾಂಕ 1-12-2004 ರಂದು ದಾಖಲಾದ ಬಗ್ಗೆ ಕಂಟ್ರೋಲ್ ರೂಮಿನಿಂದ ತಿಳಿದು ಬಂದಿರುವ ವಿಷಯವನ್ನು ಮೇಲಾಧಿಕಾರಿಗಳಿಗೆ ತಿಳಿಸುವುದು ಆದ್ಯ ಕರ್ತವ್ಯವಾಗಿದ್ದು ಅದನ್ನು ತಿಳಿಸುವಲ್ಲಿ ವಿಫಲರಾಗಿ ಕರ್ತವ್ಯ ಚ್ಯುತಿ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 23-2-2005ರ ಆದೇಶದಲ್ಲಿ

ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಎರಡು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 14–5–2007ರ ಹಿಂಬರಹದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ತಮ್ಮ ಠಾಣಾ ಸರಹದ್ದಿನಲ್ಲಿ ಜರಗುವ ಕಾನೂನು ಮತ್ತು ಸುವ್ಯವಸ್ಥೆಗೆ ಸಂಬಂಧಪಟ್ಟ ಘಟನೆಗಳ ಬಗ್ಗೆ ಶಿಸ್ತು ಪ್ರಾಧಿಕಾರಿಗಳಿಗೆ ಮಾಹಿತಿಯನ್ನು ಒದಗಿಸುವುದು ಅವರ ಆದ್ಯ ಕರ್ತವ್ಯವಾಗಿರುತ್ತದೆ. ದಿನಾಂಕ: 1–12–2004ರಂದು ಅಣ್ಣಿಗೇರಿ ಪೊಲೀಸ್ ಠಾಣೆಯ ಕಾಲವಾಡ ಗ್ರಾಮದ ಗ್ರಾಮಸ್ಥರು ಹಾಗೂ ವಿದ್ಯಾರ್ಥಿಗಳು ಬಸ್ ಸೌಕರ್ಯ ಕುರಿತಂತೆ ಬಸ್ಸುಗಳನ್ನು ತಡೆಹಿಡಿದು ರಾಸ್ತಾರೋಕೊ ಮಾಡಿದ್ದರಿಂದ ಸದರಿ ಘಟನೆಯ ಬಗ್ಗೆ ಶಿಸ್ತು ಪ್ರಾಧಿಕಾರಿಗಳಿಗೆ ಕೂಡಲೇ ಮಾಹಿತಿಯನ್ನು ನೀಡಿರುವುದಿಲ್ಲ. ಸದರಿ ಘಟನೆಯ ಬಗ್ಗೆ ಜಿಲ್ಲಾ ನಿಯಂತ್ರಣ ಕೊಠಡಿಯಿಂದ ಮಾಹಿತಿಯು ಶಿಸ್ತು ಪ್ರಾಧಿಕಾರಿಗಳ ಗಮನಕ್ಕೆ ಬಂದಿದ್ದರಿಂದ ಈ ಕುರಿತು ಶಿಸ್ತು ಪ್ರಾಧಿಕಾರಿಗಳು ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ಮೇಲೆ ಶಿಸ್ತು ಕ್ರಮ ಜರುಗಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ತಮ್ಮ ಠಾಣಾ ಹದ್ದಿನಲ್ಲಿ ಜರಗುವ ಕಾನೂನು ಸುವ್ಯವಸ್ಥೆಗೆ ಸಂಬಂಧಪಟ್ಟ ಮಾಹಿತಿಯನ್ನು ಶಿಸ್ತು ಪ್ರಾಧಿಕಾರಿಗಳಿಗೆ ತಿಳಿಸದೇ ಇದ್ದದ್ದರಿಂದ ಅವರ ಮೇಲೆ ಶಿಸ್ತು ಕ್ರಮ ಜರುಗಿಸಿರುವುದು ಸಮಂಜಸವಾಗಿರುತ್ತದೆ. ಶಿಸ್ತು ಪ್ರಾಧಿಕಾರವು ಆದೇಶವನ್ನು ರದ್ದುಪಡಿಸಲು ಅರ್ಜಿದಾರರು ಯಾವುದೇ ದಾಖಲೆಗಳನ್ನು ನೀಡುರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 373 ಪೊಸೆಇ 2007, ಬೆಂಗಳೂರು, ದಿನಾಂಕ: 26ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ವೆಂಕಟೇಶ್, ಎಪಿಸಿ–391, ಡಿ.ಎ.ಆರ್. ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಇವರ ಆದೇಶ ಸಂಖ್ಯೆ ಡಿಇ: 24: 07: ಓಬಿ: 428, 06, ದಿನಾಂಕ 30–12–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ 40 ಅಪೀಲು: ಸಿಬ್ಬಂದಿ: 2: 2006–07: ಓಬಿ: 124: 07–08, ದಿನಾಂಕ 10–8–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 19–9–2007.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಅಪೀಲು (2) 101: 07–08, ದಿನಾಂಕ 5–4–2008.

**ಪ್ರಸ್ತಾವನೆ :**

ಶ್ರೀ ವೆಂಕಟೇಶ್, ಎಪಿಸಿ–391, ಡಿ.ಎ.ಆರ್. ಶಿವಮೊಗ್ಗ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1. ಶ್ರೀ ವೆಂಕಟೇಶ್, ಎಪಿಸಿ–65, ಡಿ.ಎ.ಆರ್. ಭದ್ರಾವತಿ ರವರನ್ನು ಚನ್ನಗಿರಿ ಬಂದೋಬಸ್ತ್ ಕರ್ತವ್ಯಕ್ಕೆ ನಿಯೋಜಿಸಲಾಗಿತ್ತು. ಸದರಿ ಕರ್ತವ್ಯದಿಂದ ದಿ: 9–12–1997 ರಂದು ಬೆಳಿಗ್ಗೆ ಬಿಡುಗಡೆ ಹೊಂದಿದ್ದು, ಅದೇ ದಿನ ರಾತ್ರಿ 9–45ರ ಸಮಯದಲ್ಲಿ ಭದ್ರಾವತಿ ಡಿ.ಎ.ಆರ್. ಕಛೇರಿಯಲ್ಲಿ ಕರ್ತವ್ಯ ನಿರತನಾಗಿದ್ದ ಎ.ಹೆಚ್.ಸಿ.–42, ಚಂದ್ರಶೇಖರ್ ರವರನ್ನು ಉದ್ದೇಶ ಪೂರಕವಾಗಿ ಕೊಲೆ ಮಾಡಲು ಕೈಯಲ್ಲಿ ಮೊಚ್ಚನ್ನು ಹಿಡಿದು, ಅವರ ಎಡಕಿವಿಯ ಮೇಲೆ ಮಚ್ಚಿನಿಂದ ಹೊಡೆದು ಗಾಯಗೊಳಿಸಿ ದುಷ್ಕೃತ್ಯವನ್ನು ಎಸಗಿ, ಶಿಸ್ತು ಅಧಿಕಾರಿಯ ನೌಕರನಿಗೆ ಸಲ್ಲದ ಘೋರ ದುರ್ನಡತೆ, ದುರ್ವರ್ತನೆ ಎಸಗಿರುತ್ತಾರೆ.
2. ದಿ: 9–12–1997ರಂದು ಶ್ರೀ ಚಂದ್ರಶೇಖರ್ ರವರ ಮೇಲೆ ಹಲ್ಲೆ ಮಾಡಿದ ಬಗ್ಗೆ ನಿಮ್ಮ ಮೇಲೆ ಭದ್ರಾವತಿ ಪೇಪರ್‌ಟೌನ್ ಠಾಣೆಯ ಗುನ್ನೆ ನಂ. 136/97 ಕಲಂ 353, 324, 504, 307 ಐ.ಪಿ.ಸಿ. ರೀತ್ಯಾ ಪ್ರಕರಣ ದಾಖಲಾಗಿದ್ದು, ಈ ಕೇಸಿನಲ್ಲಿ ಆರೋಪಿಗಳು 10–12–97ರಿಂದ ನ್ಯಾಯಾಂಗ ಬಂಧನದಲ್ಲಿದ್ದು, ನಿಮ್ಮ ಕರ್ತವ್ಯದಲ್ಲಿ ಅತ್ಯಂತ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 30–12–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಿದ ಹಾಗೂ ಅಮಾನತ್ತಿನ ಅವಧಿಯನ್ನು ಆ ವೇಳೆಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸಮವೆಂದು ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 10–8–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮಾನ್ಯ ನ್ಯಾಯಾಲಯದಲ್ಲಿ ಅಪೀಲುದಾರರನ್ನು ಆರೋಪಣೆಯಿಂದ ಖುಲಾಸೆಗೊಳಿಸಿದೆ. ಆದರೆ ಇಲಾಖಾ ವಿಚಾರಣೆ ಮತ್ತು ಕ್ರಿಮಿನಲ್ ಮೊಕದ್ದಮೆಗಳು ಬೇರೆ ಬೇರೆಯಾಗಿದ್ದು, ಮಾನ್ಯ ನ್ಯಾಯಾಲಯವು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪೂರಕ ಸಾಕ್ಷ್ಯಾಧಾರಗಳು ದೊರೆಯದ ಕಾರಣ ಹಾಗೂ ಕೆಲವು ಸಾಕ್ಷಿಗಳು ನ್ಯಾಯಾಲಯದಲ್ಲಿ ಪ್ರತಿಕೂಲ ಸಾಕ್ಷಿಯಾದ ಕಾರಣದಿಂದ ಹಾಗೂ ಮುಖ್ಯ ಸಾಕ್ಷಿ ಎಹೆಚ್‌ಸಿ 22, ಗಂಗಹನುಮಯ್ಯ ಇವರು ನಿಧನರಾಗಿದ್ದು, ಸಾಕ್ಷಿ ಹೇಳಿಕೆ ಆಗದೇ ಇದ್ದು, ಪ್ರಕರಣವನ್ನು ಸಾಬೀತುಗೊಳಿಸಲು ಪ್ರಾಸಿಕ್ಯೂಷನ್ ವಿಫಲವಾದ ಕಾರಣದಿಂದ ಅಪೀಲುದಾರರನ್ನು ಆರೋಪಣೆಯಿಂದ ಖುಲಾಸೆಗೊಳಿಸಿದೆ. ಇಲಾಖಾ ವಿಚಾರಣೆಯಲ್ಲಿ ಇವರ ಮೇಲಿನ ಆರೋಪ ಸಾಬೀತಾದ ಆರೋಪಕ್ಕೆ ತಕ್ಕ ಶಿಕ್ಷೆ ವಿಧಿಸಲಾಗಿದೆ.

ಅಪೀಲುದಾರರು ಎಹೆಚ್‌ಸಿ–42 ಚಂದ್ರಶೇಖರ್‌ರವರ ಮೇಲೆ ಹಲ್ಲೆ ನಡೆಸಿರುವುದು ಅಭಿಯೊಗಪರ ಸಾಕ್ಷಿಗಳಿಂದಲೂ ಮತ್ತು ದಾಖಲೆಗಳಿಂದಲೂ ಸಾಬೀತಾಗಿರುತ್ತದೆ. ಅಪೀಲುದಾರರು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಇಲಾಖೆಯ ನೀತಿ–ನಿಯಮಗಳನ್ನು ಬಲ್ಲವರಾಗಿದ್ದು, ಸಹೋದ್ಯೋಗಿಗಳೊಂದಿಗೆ ಅಸಭ್ಯವಾಗಿ ವರ್ತಿಸಿ ಎಹೆಚ್‌ಸಿ–41 ಚಂದ್ರಶೇಖರ್‌ರವರ ಮೇಲೆ ಮಚ್ಚಿನಿಂದ ಹಲ್ಲೆ ನಡೆಸಿ ಎಡಕಿವಿಯ ಮೇಲೆ ಗಾಯಪಡಿಸಿ, ದುಷ್ಕೃತ್ಯವೆಸಗಿ ಇಲಾಖೆಯ ನೌಕರನಿಗೆ ಸಲ್ಲದ ದುರ್ನಡತೆ ಪ್ರದರ್ಶಿಸಿರುತ್ತಾರೆ. ಅಪೀಲುದಾರರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಅಪೀಲುದಾರರ ಮೇಲಿನ ಆರೋಪ ಸಾಬೀತಾದ ಕಾರಣದಿಂದಲೇ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ 2 ವರ್ಷಗಳ ಕಾಲ ಮುಂದೂಡಿದೆ. ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

2) ಸರ್ಕಾರದ ಆದೇಶ ಸಂ: ಆರ್‌ಡಿ 28 ಎಡಿಇ 2002, ದಿನಾಂಕ: 19–01–2006.

3) ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರದ ಸಂ: Lok/ARE-4/ Enq-32/2007, Dt: 03–7–2008.

**ಪ್ರಸ್ತಾವನೆ:**

ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಪತ್ರದೊಂದಿಗೆ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಹಾವೇರಿ ಜಿಲ್ಲೆ, ಹಾನಗಲ್ ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ಆರ್.ಜಿ. ಪಾಲ್ಕರ್ ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ, ಪ್ರ.ದ.ಸ ಇವರುಗಳು ಹಾನಗಲ್ ತಾಲ್ಲೂಕು ಸಮ್ಮನಗಿ ಗ್ರಾಮದಲ್ಲಿರುವ ಫಿರ್ಯಾದುದಾರರಾದ ಶ್ರೀ ಬಸವರಾಜ್ ಎಂಬುವವರ ಜಮೀನು ಸ.ನಂ.61 ಮತ್ತು 62ರ 2–02 ಎಕರೆ ಭೂಮಿಯನ್ನು ಕೃಷಿ ಭೂಮಿಯಿಂದ ಕೃಷಿಯೇತರ ಭೂಮಿಯನ್ನಾಗಿ ಪರಿವರ್ತಿಸಲು ಲಂಚ ಪಡೆದಿರುವ ಬಗ್ಗೆ ಪ್ರಥಮ ತನಿಖೆಯನ್ನು ಜರುಗಿಸಿರುವ ಲೋಕಾಯುಕ್ತರು ಸಂಬಂಧಪಟ್ಟ ಆರೋಪಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಅನುಚ್ಛೇಧ 12(3)ರಡಿಯಲ್ಲಿ ವರದಿಯನ್ನು ಕಳುಹಿಸಿದ್ದರು. ಸದರಿ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಆರ್.ಜಿ. ಪಾಲ್ಕರ್ ಹಾಗೂ ಶ್ರೀ ಎನ್.ಎಫ್. ಗಟ್ಟಿಮನಿ, ಇವರುಗಳು ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 14(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರುಗಳ ವಿರುದ್ಧ ಅದೇ ನಿಯಮಗಳ ನಿಯಮ 11 ಮತ್ತು 11(ಎ)ರನ್ವಯ ಇಲಾಖಾ ವಿಚಾರಣೆಯನ್ನು ಜರುಗಿಸಿ ಸರ್ಕಾರಕ್ಕೆ ವರದಿಯನ್ನು ನೀಡಲು ಈ ಪ್ರಕರಣವನ್ನು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿತ್ತು.

ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಇವರ ದಿನಾಂಕ: 03–07–2008ರ ಪತ್ರದಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಿ ವರದಿಯನ್ನು ಕಳುಹಿಸಿದ್ದಾರೆ. ಹಾಗೂ ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಹಾನಗಲ್ (ಪ್ರಸ್ತುತ ನಿವೃತ್ತರು) ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ, ಪ್ರ.ದ.ಸ, ತಾಲ್ಲೂಕು ಕಛೇರಿ, ಹಾನಗಲ್, ಇವರುಗಳ ವಿರುದ್ಧ ಮಾಡಲಾದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿಲ್ಲವಾದ್ದರಿಂದ ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪಲೋಕಾಯುಕ್ತರ ವರದಿ ಹಾಗೂ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಮೇಲ್ಕಂಡ ಅಧಿಕಾರಿ/ನೌಕರರ ವಿರುದ್ಧದ ಆಪಾದನೆಯಿಂದ ದೋಷಮುಕ್ತಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 28 ಎಡಿಇ 2002, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಹಾನಗಲ್ (ಪ್ರಸ್ತುತ ನಿವೃತ್ತರು) ಮತ್ತು ಶ್ರೀ ಎನ್.ಎಫ್. ಗಟ್ಟಿಮನಿ, ಪ್ರ.ದ.ಸ, ತಾಲ್ಲೂಕು ಕಛೇರಿ, ಹಾನಗಲ್ ಇವರುಗಳ ವಿರುದ್ಧದ ಆರೋಪಗಳು ಮಾನ್ಯ ಉಪಲೋಕಾಯುಕ್ತರ ವರದಿಯಲ್ಲಿ ಸಾಬೀತಾಗಿಲ್ಲದ ಕಾರಣ, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1246

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಬಿ.ಜಿ. ರಾಥೋಡ್, ಹಿಂದಿನ ತಹಶೀಲ್ದಾರ್, ಸುರಪುರ, (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ – ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರ ಪತ್ರದ ಸಂ: ಕಂ:ಶಿಸ್ತು: 36: 2006–07/ 24024, ದಿನಾಂಕ: 17–03–2007.

2) ಶ್ರೀ ಬಿ.ಜಿ. ರಾಥೋಡ್, ಹಿಂದಿನ ತಹಶೀಲ್ದಾರ್, ಸುರಪುರ, ಇವರಿಗೆ ಜಾರಿ ಮಾಡಿದ ಕಾರಣ ಕೇಳುವ ನೋಟೀಸಿನ ಸಂ: ಆರ್‌ಡಿ 62 ಎಡಿಇ 2005, ದಿನಾಂಕ: 18–05–2007.

3) ಶ್ರೀ ಬಿ.ಜಿ. ರಾಥೋಡ್, ತಹಶೀಲ್ದಾರ್, ಇವರ ಲಿಖಿತ ಸಮಜಾಯಿಷಿ ದಿನಾಂಕ: 19–06–2007.

4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ: ಪಿಎಸ್‌ಸಿ: 107 ಸಿಎನ್‌ಎಸ್ 07, ದಿನಾಂಕ: 24–09–2007.

**ಪ್ರಸ್ತಾವನೆ:**

ಶ್ರೀ ಬಿ.ಜಿ. ರಾಥೋಡ್, ನಿವೃತ್ತ ತಹಶೀಲ್ದಾರ್, ಇವರು ಈ ಹಿಂದೆ ತಹಶೀಲ್ದಾರ್, ಸುರಪುರ ತಾಲ್ಲೂಕಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪ್ರಕರಣ ಸಂ: ಕಂ: ಆರ್‌ಓಆರ್: 85:2002–03, ದಿನಾಂಕ: 22–03–2003ರಲ್ಲಿ ಸುರಪುರ ತಾಲ್ಲೂಕಿನ ಕಾಮನಟಗಿ ಗ್ರಾಮದ ಸ.ನಂ: 42/ಎರಲ್ಲಿ 1970–71ನೇ ಸಾಲಿನ ಹಿಸ್ಸಾ ಸರ್ವೆ ಮತ್ತು ಫಾರಂ ನಂ: 10ನ್ನು ಆಧರಿಸಿ, ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ನಿಯಮ 142ರನ್ವಯ ಅರ್ಜಿದಾರರಾದ ಶ್ರೀ ಸಂಗನಗೌಡ ತಂದೆ ಸೋಮಪ್ಪಗೌಡ ಮತ್ತು ಇತರರಿಗೆ ಸೇರಿದ ಜಮೀನಿನ ವಿಸ್ತೀರ್ಣವನ್ನು 12 ಎಕರೆ 14 ಗುಂಟೆಯಿಂದ 15 ಎಕರೆ 10 ಗುಂಟೆಗೆ ಜಾಸ್ತಿ ಮಾಡಿ ಆದೇಶ ಹೊರಡಿಸಿರುತ್ತಾರೆ. ಆದರೆ ಸುರಪುರ ತಾಲ್ಲೂಕಿನ ಕಾಮನಟಗಿ ಗ್ರಾಮದ ಸ.ನಂ: 42ಕ್ಕೆ ಸಂಬಂಧಿಸಿದಂತೆ ಭೂ ದಾಖಲೆಗಳ ಜಂಟಿ ನಿರ್ದೇಶಕರು, ಗುಲ್ಬರ್ಗಾರವರು ಅವರ ನ್ಯಾಯಾಲಯದ ಪ್ರಕರಣ ಸಂ: ತಾಂತ್ರಿಕ/ ರಿವಿಜನ್/ ಅರ್ಜಿ/6/2002–03, ದಿನಾಂಕ: 17–09–2002ರಲ್ಲಿ 1974–75ನೇ ಸಾಲಿನಲ್ಲಿ ಹಿಸ್ಸಾ ಪೋಡಿ ನಕ್ಷೆ ತಯಾರಿಸಿರುವುದನ್ನು ರದ್ದು ಮಾಡಿ ಫಾರಂ ನಂ: 10 ರಲ್ಲಿ ದಾಖಲೆ ಆಗಿರುವುದನ್ನು ಸಹ ವಜಾಗೊಳಿಸಿ ಹೊಸದಾಗಿ ಹಿಸ್ಸಾ ಫಾರಂ ನಂ: 10ಮತ್ತು ಹಿಸ್ಸಾ ಪೋಡಿ ನಕ್ಷೆ ತಯಾರಿಸಲು ಆದೇಶಿಸಿರುತ್ತಾರೆ. ಈ ರೀತಿ 1970–71 ನೇ ಸಾಲಿನ ಹಿಸ್ಸಾ ಪೋಡಿಯನ್ನು ಗಣನೆಗೆ ತೆಗೆದುಕೊಂಡು ವಿಸ್ತೀರ್ಣವನ್ನು ಹೆಚ್ಚಿಸಿರುವುದು ಕಾನೂನು ಬಾಹಿರವಾಗಿರುತ್ತದೆ. 1974–75ನೇ ಸಾಲಿನಲ್ಲಿ ಆಗಿರುವ ಹಿಸ್ಸಾ ಪೋಡಿಯನ್ನು ರದ್ದು ಮಾಡಿರುವುದರಿಂದ 1970–71ನೇ ಹಿಸ್ಸಾ ಪೋಡಿಯನ್ನು ಗಣನೆಗೆ ತೆಗೆದುಕೊಳ್ಳಲು ಬರುವುದಿಲ್ಲ. ಈ ಅಂಶವನ್ನು ಗಮನಿಸದ ತಹಶೀಲ್ದಾರರು ಆದೇಶಿರುವುದು ಕಾನೂನು ಬಾಹಿರ ಹಾಗೂ ಕರ್ತವ್ಯ ಲೋಪವೆಸಗಿರುವ ಕಾರಣ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ ದೋಷಾರೋಪಣಾ ಪಟ್ಟಿ (ಅನುಬಂಧ 1 ರಿಂದ 4ರವರೆಗೆ)ಗಳೊಂದಿಗೆ ಮೇಲೆ ಕ್ರ.ಸಂ. 1ರಲ್ಲಿ ಓದಲಾದ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿಯಲ್ಲಿ ಮೇಲ್ಕಂಡ ಪತ್ರದಲ್ಲಿ ಪ್ರಸ್ತಾಪಿಸಲಾಗಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಬಿ.ಜಿ. ರಾಥೋಡ್, ತಹಶೀಲ್ದಾರ್ ಇವರಿಗೆ ಆರೋಪಗಳ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು ಮೇಲೆ ಕ್ರ.ಸಂ: (2)ರಲ್ಲಿ ಓದಲಾದ ದಿನಾಂಕ: 18–05–2007ರಲ್ಲಿ ನೋಟೀಸನ್ನು ನೀಡಲಾಗಿತ್ತು. ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಬಿ.ಜಿ. ರಾಥೋಡ್, ತಹಶೀಲ್ದಾರ್ ಇವರು ತಮ್ಮ ವಿರುದ್ಧ ಮಾಡಲಾದ ಆರೋಪವನ್ನು ಒಪ್ಪಿಕೊಂಡಿದ್ದು, ಅದು ಉದ್ದೇಶಪೂರ್ವಕ ಮಾಡಿದ ತಪ್ಪು ಅಲ್ಲವಾದ್ದರಿಂದ ಹಾಗೂ ತಾವು ದಿನಾಂಕ: 30–06–2007ರಂದು ನಿವೃತ್ತಿ ಹೊಂದುತ್ತಿರುವುದರಿಂದ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಈ ಹಿನ್ನಲೆಯಲ್ಲಿ ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಅಧಿಕಾರಿಯವರು ತಮ್ಮ ತಪ್ಪನ್ನು ಒಪ್ಪಿಕೊಂಡಲ್ಲಿ ಮುಂದಿನ ವಿಚಾರಣೆಯ ಅಗತ್ಯತೆ ಇರುವುದಿಲ್ಲವೆಂದು ಭಾವಿಸಿ ಇವರಿಗೆ ದಂಡನೆಯನ್ನು ವಿಧಿಸಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 62 ಎಡಿಇ, 2005, ಬೆಂಗಳೂರು, ದಿನಾಂಕ: 03ನೇ ಜುಲೈ 2008**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಜಿ. ರಾಥೋಡ್, ಹಿಂದಿನ ತಹಶೀಲ್ದಾರ್, ಸುರಪುರ (ಪ್ರಸ್ತುತ ನಿವೃತ್ತರು) ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 214(1)(ಎ)ರನ್ವಯ ಇವರ ಪಿಂಚಣಿಯಲ್ಲಿ ಶೇ.5 (ಶೇಕಡ ಐದರಷ್ಟು) ರಷ್ಟನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಈ ಅಧಿಕಾರಿಗಳು ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ದಂಡನೆ ವಿಧಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಅಯೋಗದಿಂದ ಮೇಲೆ ಓದಲಾದ ಉಲ್ಲೇಖ(4)ರ ಪತ್ರದಲ್ಲಿ ಸಹಮತಿ ಪಡೆಯಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1027

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)